


**ಮಾರ್ಚ್, 1995**

# ಸಪ್ತಗಿರಿ

ಬೆಲೆ : ರೂ. 2/-

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಶ್ರೀ ಮಜ್ಜಗನ್ಮುಕುರ ವಿಸ್ತರದೊಳಾರ್ ತನ್ನ
ಮೈಮೆಯ ಪ್ರತಿಬಿಂಬ ಚಿತ್ರಗಳ ನೋಡು-
ತ್ತಾಮೋದ ಪಡುತಿಹನೊ ಆತನಡಿದಾವರೆಯ
ಸಾಮರಸುವಂ ಬಾರೊ ಮರುಳ ಮುನಿಯ

ಶ್ರೀಮಜ್ಜಗದ್ದರ್ಪಣದೊಳಗಾವ ರಾಜಂ ಸ್ವ
ಸಾಮ್ರಾಜ್ಯ ಬಿಂಬಗಳ ತಾಂ ಕಾಣಲೆಂದು
ಈ ಮೋಹನಾಗಾರವಂ ನಿರವಿಸಿದನವನ
ಸಾಮರಸುವಂ ಬಾರೊ ಮರುಳ ಮುನಿಯ

ಈ ಭುವನ ಮುಕುರದೊಳಗಾವಾಸಿತಂ ತನ್ನ
ವೈಭವ ವಿಲಾಸಗಳ ಕಾಣಲೆಂದೆಳೆಸಿ
ಈ ಭಿದುರ ಭಿತ್ತಿಗಳ ನಿರವಿಸಿದನೊ ಅವನ
ಶೋಭೆಗೆರಗುವ ಬಾರೊ ಮರುಳ ಮುನಿಯ

ಶ್ರೀಮಂತನಾವನೀ ಭುವನ ಮುಕುರದಿ ನಿಜ
ಸ್ವಾಮಿತೆಯ ಲೀಲೆಗಳ ನೋಡಿ ನಲಿಯಲ್ಕೀ
ಭೂಮ ಪ್ರಪಂಚವನು ನಿರವಿಸಿದನೋ ಅವನ
ಸಾಮರಸುವಂ ಬಾರೋ — ಮರುಳ ಮುನಿಯ

--ಡಿ. ವಿ. ಜಿ.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೇದನಾರಾಯಣಸ್ವಾಮಿ ಆಲಯ

## ನಾಗುಲಾಪುರಂ



## ವಾರ್ಷಿಕ ಬ್ರಹ್ಮೋತ್ಸವ

### 14--4--95 ರಿಂದ 23--4--95 ವರೆಗೆ

| | | |
|---|---|---|
| 15--4--95 | ಶನಿವಾರ | ಧ್ವಜಾರೋಹಣ. |
| 19--4--95 | ಬುಧವಾರ | ಗರುಡೋತ್ಸವ. |
| 22--4--95 | ಶನಿವಾರ | ರಥೋತ್ಸವ. |
| 23--4--95 | ಭಾನುವಾರ | ಅವಭೃಥ. |

ಸೂಚನೆ : ನಾಗುಲಾಪುರ ತಿರುಪತಿ -- ಮದರಾಸು ಹಾದಿಯಲ್ಲಿದೆ. ಶ್ರೀ ವೇದನಾರಾಯಣಸ್ವಾಮಿ ದೇವಾಲಯಶ್ರೀ ಕೃಷ್ಣದೇವರಾಯನಿಂದ ಜೀರ್ಣೋದ್ಧಾರವಾದದ್ದು ಅತಿ ಸುಂದರ ಶಿಲ್ಪಕಲೆಯ ಸಾಕಾರವಾಗಿದೆ. ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳುಂಟು. ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು. ವಿವರಗಳಿಗೆ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ತಾವೂ ಬನ್ನಿ. ತಿ. ತಿ. ದೇ. ತಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು :

ಶ್ರೀ ಎನ್. ರಮೇಶ್‌ಕುಮಾರ್, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**





ಸಂಪುಟ -- 25 ಮಾರ್ಚ್ 1995 ಸಂಚಿಕೆ --10


# ವಿಷಯಸೂಚಿ



ಮುಖ ಚಿತ್ರ : ಶ್ರೀ ವೆಂಕಟೇಶ್ವರಸ್ವಾಮಿ -- ಮುತ್ತಿನ ಚಪ್ಪರ ವಾಹನದಲ್ಲಿ.

ಹಿಂಬದಿಯಲ್ಲಿ : ಶ್ರೀ ಗೋವಿಂದರಾಜಸ್ವಾಮಿ ದೇವಾಲಯ.

ಒಳಗಡೆ : 1) ತಿರುಮಲೆಯಲ್ಲಿ ತೆಪ್ಪೋತ್ಸವ.

2) ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ದೇವಾಲಯ.




ಕಲಿಯುಗದ ಪ್ರತ್ಯಕ್ಷ ದೈವವೆಂದು ಕರೆದರು ಈಗಿನ ಕರ್ನಾಟಕ ತಮಿಳುನಾಡು ಆಂಧ್ರಪ್ರದೇಶಗಳ ಕೂಡುವೆಡೆಯ ತಿರುಮಲೆಯಲ್ಲಿ ನೆಲೆನಿಂತ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು. ಆತನಿಗೆ ಪೂಜೆ, ನಿವೇದನೆಗಳನ್ನು ಮಾಡುತ್ತ ಭವಬಂಧನವನ್ನು ಹರಿಸಿಕೊಳ್ಳುವುದೇ ಜೀವನೋದ್ದೇಶವಾಗಬೇಕೆಂದರು. ಪುರಾಣ ಕಾಲದಿಂದಲೂ ಸ್ವಾಮಿಯನ್ನು ಸೇವಿಸುವುದರಲ್ಲಿಯೇ ಸರ್ವಾರ್ಥಸಾರವನ್ನು ಕಂಡು ಕೊಂಡವರು ಮಹಾ ಮಾನವರಾಗಿ, ಸಂತ ಶ್ರೇಷ್ಠರಾಗಿ ಇತಿಹಾಸದಲ್ಲಿ ಹೆಸರಾದರು. ಅವರ ಸಂಖ್ಯೆಯೂ ಅಸದಳವೇ ಆದರೂ ಮಲೆಯಪ್ಪನನ್ನು ಮೊದಲಿಗೆ ನೆನೆದು ನಡೆದುಕೊಂಡವರಲ್ಲಿ ತಮಿಳಿನ ಆಳ್ವಾರ್‌ಗಳು ಇಂದಿನ ದಾಖಲೆಯ ದೃಷ್ಟಿಯ ಹರವಿನಲ್ಲಿ ಅತ್ಯಂತ ಪ್ರಾಚೀನರು ಎನ್ನಬೇಕು. (ಶಿಲಪ್ಪದಿಕಾರದಲ್ಲಿಯೂ ಬೆಟ್ಟದೊಡೆಯನ ಬಗ್ಗೆ ಬರೆದಿರುವುದುಂಟಾದರೂ ಅದು ಸಾಮಾನ್ಯರನ್ನು ಸೆಳೆಯುವಷ್ಟು ಪ್ರಬಲವಲ್ಲ.)

ಹಾಗೆ ನೋಡಿದರೆ ಕುಲಶೇಖರ ಆಳ್ವಾರರು ತಮಿಳು ಎನ್ನುವ ಸೀಮೆಯ ಒಳಗೆ ಖಚಿತವಾಗಿದ್ದವರಲ್ಲ. ಅವರದ್ದು ಕೇರಳ ಪ್ರಾಂತ. ಚೋಳಪಟ್ಟಣದಲ್ಲಿ ಕುಂಭ ಮಾಸದ ಪುನರ್ವಸು ನಕ್ಷತ್ರದಲ್ಲಿ ಹುಟ್ಟಿದವರು. ಅವರಿಗೆ ರಾಮಾಯಣದಲ್ಲಿಯೂ, ರಂಗನಾಥನಲ್ಲಿಯೂ ಅದ್ವಿತೀಯವಾದ ಭಕ್ತಿ. ಅವರು ಯಶಸ್ವಿ ಆಡಳಿತ ನಡೆಸಿದ ರಾಜರೇ ಆದರೂ ಭಕ್ತಿಯ ಭರದಿಂದಾಗಿ ರಾಜ್ಯ ಕೋಶಗಳನ್ನು ತೊರೆದು ನಡೆದವರು. ಎತ್ತಣ ಮಾಮರ ಎತ್ತಣ ಕೋಗಿಲೆ -- ತಿರುಮಲೆಯೆಲ್ಲಿ -- ತಿರುವಂಜಿಕುಳವೆಲ್ಲಿ -- ಅವರಿಗೆ ತಿರುಮಲೆಯಲ್ಲಿ ಸಂಪಿಗೆ ಮರವಾಗಿ, ಒಂದು ಕಲ್ಲಾಗಿ, ಅಲ್ಲಿನ ಸ್ವಾಮಿ ಪುಷ್ಕರಿಣಿಯಲ್ಲಿ ಒಂದು ಮೀನಾಗಿ ಹುಟ್ಟುವ ಆಸೆ. ಅವರು ಬರೆದದ್ದು ನೂರೈದು ಪಾಶುರಗಳ ಪೆರುಮಾಳ್ ತಿರುಮೊಳಿಯಲ್ಲಿನ ಹನ್ನೊಂದು ಪಾಶುರಗಳು ತಿರುವೆಂಗಡದೊಡೆಯನನ್ನು ಕುರಿತಾದವು, ಎಲ್ಲವೂ ತಿರುಮಲೆಯಲ್ಲಿ ಏನಾದರೂ ಆಗಿ ಹುಟ್ಟಬೇಕು ಎಂಬ ಆಶಯವನ್ನೇ ಬಿಂಬಿಸುತ್ತವೆ. ತಿರುವೇಂಗಡವೆನ್ನುಂ ಎಂಬೆರುಮಾನ್ ಪೊನ್ಮಲೈ ಮೇಲೇದೇನು ಮಾವೇನೇ --ಎಂಬುದೇ ಅದರ ಛಂದವಾಗಿದೆ, ನಡೆಯಾಗಿದೆ. ಪಡಿಯಾಯ್ ಕಿಡಂದುನ್ ಪವಳವಾಯ್ ಕಾಣ್ಬೇನೆ -- (ಹೊಸಿಲಾಗಿದ್ದುಕೊಂಡು ನಿನ್ನ ಹವಳದುಟಿಯನು ಕಾಂಬೆನೇ?) ಎಂಬುದರಿಂದಲೇ ಸ್ವಾಮಿಯ ಮುಂದಿರುವ ಹೊಸಿಲಿಗೆ ಕುಲಶೇಖರಪಡಿ ಎಂದರು. ಸ್ವಾಮಿಯ ಸಂದರ್ಶನಕ್ಕೆ -- ನೋಡಬಂದವರಿಗೆ ಅಲ್ಲಿಂದ ಮುಂದೆ ಪ್ರವೇಶವಿಲ್ಲ. (ಇದೇ ಹೆಸರು ಇತರ ದೇವಾಲಯಗಳಲ್ಲೂ -- ಕಾರಣ ಅವರಿಗಿಂತ ಮುಂದೆ ಹೋಗಿ ದೇವರನ್ನು ದೃಷ್ಟಿಸಬಾರದು ಎಂಬ ಗೌರವ ಸೂಚನೆ.)

ಅವರು ಬರೆದ ಇನ್ನೊಂದು ಕೃತಿ ಮುಕುಂದಮಾಲೆ. ನಲವತ್ತು ಪದ್ಯಗಳ ಸಂಸ್ಕೃತ ಪದ್ಯಮಾಲೆ. ಜಿಹ್ವೇ ಕೀರ್ತಯ ಕೇಶವಂ -- ಎಂದು ಬೇಡುವ ಅವರು ಮುಕುಂದನಲ್ಲಿಯೂ ತಮ್ಮ ಬೇಡಿಕೆಯನ್ನು ಮುಂದುಮಾಡುತ್ತಾರೆ. ಜನ್ಮ ಜನ್ಮಾಂತರೇಪಿ ತ್ವತ್ಪಾದಾಂಭೋರುಹಯುಗಗತಾ ನಿಶ್ಚಲಾ ಭಕ್ತಿರಸ್ತು. ಅವರಿಗೆ ಬೇರೇನೂ ಬೇಕಿಲ್ಲವೆಂಬುದು ಪೆರುಮಾಳ್ ತಿರುಮೊಳಿಯಲ್ಲೂ ಮುಕುಂದ ಮಾಲೆಯಲ್ಲೂ ಸ್ಪಷ್ಟವಾಗಿ ಖಚಿತವಾಗಿ ಹೇಳಿದ್ದಾರೆ.

ಎಂತಲೇ ಅವರು ಇಂದೂ ಮುಖ್ಯರಾಗುತ್ತಾರೆ, ಇತರೆಯವುಗಳೇ ಬೇಕೆಂದು ಬದುಕು ಸಾಗಿಸುವ ಹಿನ್ನೆಲೆಯಲ್ಲಿ. ಆದರೂ ಅವರೊಂದು ಆದರ್ಶವಾಗಲಾರರೇ. ಬೇರೆಯವೆಲ್ಲ ಬೇಕೆಂಬ ಬಾಳಿನಲ್ಲಿ ಇಂತಹ ಆದರ್ಶವೂ ಒಂದು ಅಗತ್ಯವೇ ಅಲ್ಲವೇ ಎಂಬ ಯೋಚನೆ ಯಾದರೂ ಇರಬೇಕು. ಆಗ ಮಾತ್ರ ಜೀವನ ಸಾರ್ಥಕವಾಗಬಲ್ಲದು.

-- ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ --

* * * * *

# ವ್ಯಾಪಕ ತಿರುಪತಿ ಕ್ಷೇತ್ರಗಳು

---ಸಿ. ಗೋವಿಂದಾಚಾರ್.

ಭಗವಂತನ ಅನುಗ್ರಹ ಹಾಗೂ ಸಾಕ್ಷಾತ್ಕಾರ ಪಡೆದ ಆಳ್ವಾರ ಮಹಾನರ ಸೇವೆಯಿಂದ ಪವಿತ್ರವಾಗಿರುವ ದೇವಸ್ಥಾನಗಳೇ ದಿವ್ಯಕ್ಷೇತ್ರಗಳು. 'ದಿವ್ಯ' ಎಂಬ ಪದದಲ್ಲಿ ಆಳ್ವಾರರ ಭಕ್ತಿಪ್ರಾಕಾರಗಳಾದ ಪರಭಕ್ತಿ, ಪರಜ್ಞಾನ ಹಾಗೂ ಪರಮ ಭಕ್ತಿ ಸೇರಿವೆ. ಕ್ಷೇತ್ರಸೇವನೆಯನ್ನೇ ಹವ್ಯಾಸಮಾಡಿಕೊಂಡು ಪಾದಚಾರಿಗಳಾಗಿ ಅಲೆದಲೆದು 'ಗೃಹಾರಾಧನೆಗಿಂತ ಆಲಯಾರ್ಚನೆ ಅಮೂಲ್ಯವಾದುದು' ಎಂದು ಸಾರಿ ಭಕ್ತಕೋಟಿಗೆ ಆದರ್ಶ ತೋರಿದ್ದಾರೆ. ಇವರುಗಳು ದಿವ್ಯಕ್ಷೇತ್ರದ ಪ್ರಥಮ ಪೌರರು.

## ರಚನೆ -- ವ್ಯಾಪ್ತಿ :

ಈ ಸ್ಥಾವರ ಕ್ಷೇತ್ರಗಳನ್ನು ೧೦೮ ತಿರುಪತಿಗಳು ಎಂದು ಜ್ಞಾನಿಗಳು ಗುರುತಿಸಿದ್ದಾರೆ. ಸಾಂಸ್ಕೃತಿಕ ಪ್ರಸಾರಕೇಂದ್ರಗಳಾದ ಇವು ಬದರಿಯಿಂದ ತಿರುವನಂತಪುರದವರೆಗೆ ವ್ಯಾಪಿಸಿವೆ. ಇವುಗಳ ಪೈಕಿ ಕ್ಷೀರಸಾಗರ ಹಾಗೂ ವೈಕುಂಠ ಮನುಷ್ಯರಿಗೆ ಎಟುಕದ ಕ್ಷೇತ್ರಗಳಾಗಿವೆ. ಇನ್ನು ಮಿಕ್ಕ ಕ್ಷೇತ್ರಗಳ ಜಾಲದಲ್ಲಿ ಉತ್ತರ ಭಾರತದಲ್ಲಿ ೯, ದಕ್ಷಿಣದ ಚೋಳ, ಪಾಂಡ್ಯನಡುನಾಡುಗಳಲ್ಲಿ ೮೭ ಮತ್ತು ಚೇರದೇಶದಲ್ಲಿ ೧೩ ಕ್ಷೇತ್ರಗಳನ್ನು ನೋಡಬಹುದು. ತಿರುನಹರಿಯ ನವತಿರುಪತಿಗಳು, ನಾಂಗೂರಿನ ೧೧ ಕ್ಷೇತ್ರಗಳು ಕಂಚಿಯ ೧೮ ಕ್ಷೇತ್ರಗಳು ಹೂಗೊಂಚಲಿನಂತೆ ರಚಿತವಾಗಿದೆ. ತಮಿಳುನಾಡಿನ ಕಾವೇರಿ ಪ್ರದೇಶದಲ್ಲಿ ತಿರುಚ್ಚಿಯಿಂದ ಕುಂಭಕೋಣದವರೆಗೆ ಸುಮಾರು ೪೦ ಕ್ಷೇತ್ರಗಳ ಸಾಲು ಹಾಗೂ ಗುಂಪನ್ನು ನೋಡಬಹುದು. ಪರ್ವತಗಳು ದಿಬ್ಬಗಳು ಅರಣ್ಯ ಹಾಗೂ ನದಿಗಳು ಕೂಡ ದಿವ್ಯ ಕ್ಷೇತ್ರವೆಂದು ವೈದಿಕ ಸಾಹಿತ್ಯ ಹೇಳುವುದು. ತಿರುಕಣ್ಣ ಪುರಂ, ಮಧುರೈ ಸಮಿಪವಿರುವ ಅಳಹರ್ ಮಲೈ ಅಹೋಬಿಲ ಅರಣ್ಯ ಮಧ್ಯವಿರುವ ಕ್ಷೇತ್ರಗಳಾಗಿವೆ. ನೈಮಿಷಾರಣ್ಯದಲ್ಲಿ ಮೂಲದೇವಸ್ಥಾನವಿಲ್ಲ. ಇಡಿ ಅರಣ್ಯವನ್ನೇ ಆಳ್ವಾರರು ಮಂಗಳಾಶಾಸನಮಾಡಿರುತ್ತಾರೆ. ಶೋಲಿಂಗರ್, ಮೇಲುಕೋಟೆ ಮುಂತಾದ ನೃಸಿಂಹಕ್ಷೇತ್ರಗಳು ಊರು ಪಟ್ಟಣಗಳ ಸಡಗರ ಸಂಭ್ರಮವಾತಾವರಣದಿಂದ ದೂರವಿದ್ದು ಭಯಪೀಡಿತರಿಗೆ ನಿವಾರಣೆ ಹಾಗೂ ವಾಮಾಚಾರಗಳನ್ನು ತಡೆಗಟ್ಟುವ ಕ್ಷೇತ್ರಗಳಾಗಿವೆ. ತಿರುಕ್ಕುರುಹೂರ್ (ನಮ್ಮಾಳ್ವಾರರು) ಯಥೋಕ್ತಕಾರಿ (ಪೊಯ್ಗೈ ಆಳ್ವಾರರು) ಮಹಾಬಲಿ ಪುರಂ (ಪೂದತ್ತಾಳ್ವಾರರು) ತಿರುನಾಂಗೂರು (ತಿರುಮಂಗೈ ಆಳ್ವಾರರು) ಕ್ಷೇತ್ರಗಳು ಆಳ್ವಾರರ ಅವತಾರಸ್ಥಳವೆಂದು ಪ್ರಸಿದ್ಧಿ ಹೊಂದಿದೆ. ದಿವ್ಯಕ್ಷೇತ್ರಗಳಲ್ಲಿ ಕೆಲವಕ್ಕೆ (ಶ್ರೀರಂಗ ತಿರುಪತಿ ಇತ್ಯಾದಿ) ಭಗವದ್ವೈಭವದಿಂದಲೂ, ಕೆಲವಕ್ಕೆ (ಉರೈಯೂರ್ ತಿರುನರೈಯೂರ್, ತಿರುನಿನ್ರ ಊರ್ ಇತ್ಯಾದಿ) ದಿವ್ಯ ಮಹಿಷಿಯ ವೈಭವದಿಂದಲೂ, ಕಂಚಿ, ತಿರುವಹೀಂದ್ರಪುರಂ, ನವಾಳ್‌ಪಾಕಂ ಮುಂತಾದುವಕ್ಕೆ ಭಾಗವತರ ವೈಭವದಿಂದ ಪ್ರಾಧಾನ್ಯತೆ ಇದೆ. ಶ್ರೀವಿಲ್ಲಿಪುತ್ತೂರ್ ಈ ಮೂರು ವೈಭವಗಳನ್ನು ಹೊಂದಿರುವ ಕ್ಷೇತ್ರವಾಗಿದೆ.

ಶ್ರೀರಂಗವನ್ನು ಸೇವಿಸಿದವರು ಸಮಿಪದಲ್ಲೇ ಇರುವ ಉರೈಯೂರ್‌ವಲ್ಲಿ (ನಾಚ್ಚಿಯಾರ್ ಕೋಯಿಲ್)ಯನ್ನು ಸೇವಿಸದೇ ಬರುವುದಿಲ್ಲ. ಹೀಗೆಯೇ ತಿರುಪತಿ -- ತಿರುಚಾನೂರು. ಪಂಚರಂಗನಾಥ, ಪಂಚಕೃಷ್ಣ, ಪಂಚದ್ವಾರಕ ಸಪ್ತಬದರಿ ಅಹೋಬಿಲದ ನವನಾರಸಿಂಹ ಮುಂತಾದುವು ಸಾಂಖ್ಯಿಕವಾಗಿಯೂ ಪ್ರಸಿದ್ಧಿಹೊಂದಿವೆ. ಒಂದನ್ನು ಬಿಡದೆ ಇವೆಲ್ಲವನ್ನು ಸೇವಿಸಿದರೆ ವಿಶೇಷ ಫಲಕಾರಿ ಎಂಬುದೇ ಈ ಸಂಖ್ಯೆಗಳ ಮೋಜಿನಲ್ಲಿರುವ ರಹಸ್ಯ. ಕೆಲವು ಕ್ಷೇತ್ರ ನಗರಗಳು ಒಂದಾನೊಂದು ಕಾಲದಲ್ಲಿ ಭವ್ಯನಗರವಾಗಿ ಮೆರೆಯುತ್ತಿದ್ದುದರಿಂದ ಅವುಗಳನ್ನು 'ವಿಣ್ಣಹರಂ' (ಗಗನ ನಗರ) ಎಂದು ಕರೆಯಲಾಗಿದೆ. ಪರಮೇಚ್ಚುರ (ಕಂಚಿ) ಅರಿಮೇಯ ಹಾಗೂ ವೈಕುಂಠ ವಿಣ್ಣಹರಂ (ನಾಂಗೂರು) ಉಪ್ಪಿಳಿಯಪ್ಪನ್ ಹಾಗೂ ನಂದಿವನಂ (ಕುಂಭಕೋಣ) ತಿರುಕಾಳೀಚ್ಚಿರಾಮ ವಿಣ್ಣಹರಂ (ಶೀರ್ಹಾಳಿ) -- ಇವೆ ಆರು ವಿಣ್ಣಹರಂಗಳು. ಸಂಖ್ಯೆಗಳ ಗೋಜಲು ಇನ್ನೂ ಇದೆ. ಕಂಚಿಯ ಒಂದು ಉಲಹಳಂದ ಪೆರುಮಾಳ್ ಕ್ಷೇತ್ರವು ಊರಹಂ, ಪೇರಹಂ, ನೀರಹಂ ಕಾರಹಂ ಮತ್ತು ಕಾರವಾನಂ ಎಂದು ಐದು ಕ್ಷೇತ್ರಗಳ ಲೆಕ್ಕ. ಈ ಕೊನೆಯ ೪ ಮೂರ್ತಿಗಳನ್ನು ಸಮರಗಳಿಂದ ರಕ್ಷಿಸಲ್ಪಟ್ಟು ಊರಹಂ ಕ್ಷೇತ್ರಕ್ಕೆ ವರ್ಗಾಯಿಸಲ್ಪಟ್ಟಿತೆಂದು ಅರ್ಚಕರಿಂದ ತಿಳಿದು ಬಂದಿದೆ. ಕಾಮಾಕ್ಷಿ ದೇವಾಲಯದಲ್ಲಿ ಕಳ್ವರ್ ಸನ್ನಿಧಿ ಹಾಗೂ ಏಕಾಂಬರೀಶ್ವರ ದೇವಸ್ಥಾನದಲ್ಲಿರುವ ನಿಳಾತಿಂಗಳ್ ತುಂಡ ಪೆರುಮಾಳ್ ಸನ್ನಿಧಿ -- ಈ ಎರಡೂ ಸನ್ನಿಧಿಗಳು ದಿವ್ಯಕ್ಷೇತ್ರಗಳ ಲೆಕ್ಕ. ತಂಜಾವೂರಿನ ಸಮಿಪ ವಣ್ಣಾತವನ್‌ಕರೈ (ದೋಬಿಘಾಟ್) ಎಂಬ ಜಾಗದಲ್ಲಿ ವೀರನೃಸಿಂಹ, ನೀಲಮೇಘನ್ ಮತ್ತು ಮಣಿವಣ್ಣನ್ ಎಂಬ ಮೂರು ಕ್ಷೇತ್ರಗಳು ಸೇರಿ ಒಂದು






ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :




ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ಎಂದು ಲೆಕ್ಕ, ಇಲ್ಲಿಯ ತಾಯಾರ್, ತಂಜಮಾಮಣಿ.

ವ್ರಜದೇಶದ ಗೋಕುಲ, ಬೃಂದಾವನ ಮಥುರಾಕ್ಷೇತ್ರಗಳಲ್ಲಿ ಆಳ್ವಾರುಗಳು ಸ್ತುತಿಸಿರುವ ಮೂರ್ತಿಗಳಾವುವು ಇಂದು ಗುರುತಿಸುವುದಕ್ಕಾಗುವುದಿಲ್ಲ. ಮುಸ್ಲಿಮರ ಹಾವಳಿಯಿಂದ ಅವೆಲ್ಲವೂ ಲಯವಾಯಿತು. ಕರ್ನಲ್ ಟಾಡ್‌ರವರ 'ದಿ ಅನಾಲ್ಸ್ ಅಂಡ್ ಆಂಟಿಕ್ವಿಟೀಸ್ ಆಫ್ ರಾಜಾಸ್ಥಾನ್' ಕೃತಿಯ ಪ್ರಕಾರ ಗೋವರ್ಧನ ಗಿರಿಯ ಗುಹೆಯಲ್ಲಿದ್ದ ಮೂರ್ತಿಯನ್ನು ವಲ್ಲಭಾಚಾರ್ಯರು ಮುಸ್ಲಿಮರ ಲೂಟಿಯಿಂದ ತಪ್ಪಿಸಿ ಸುರಕ್ಷಿತವಾಗಿ ರಾಜಾಸ್ಥಾನದ ದಿಲ್‌ವಾರಾ ತಾಲ್ಲೂಕಿನ ಸಿಯಾಡ್ ಗ್ರಾಮದಲ್ಲಿ (ನಾಥದ್ವಾರ) ಪ್ರತಿಷ್ಠಾಪಿಸಿದರು ಎಂದು ವಿವರಣೆ ಇದೆ. ದ್ವಾರಕೆ ಒಂದು ಮುಳುಗಿಹೋದ ಕಥೆ. ಇಂಥಾದ್ದೇ ಒಂದು ಪರಿಸ್ಥಿತಿ ಮಹಾಬಲಿಪುರಂ ಕ್ಷೇತ್ರಕ್ಕೆ ಒದಗಿತ್ತು. ಎಷ್ಟೋ ವರ್ಷಗಳ ನಂತರ ಈಗಿರುವ ಭುಜಗಶಯನ ದೇವಸ್ಥಾನ ಉದಯಿಸಿತು. ಅಹೋಬಿಲ ಎಲ್ಲರಿಗೂ ಎಟುಕದ ಕ್ಷೇತ್ರ. ಕ್ರೂರ ಮೃಗಗಳು ಮುಳ್ಳು ಬಿದಿರು ಗಿಡಮರಗಳನ್ನೊಳಗೊಂಡ ದಟ್ಟವಾದ ಕಾಡು ನವನಾರಸಿಂಹ ಸನ್ನಿಧಿಗಳು ಬೇರೆ ಬೇರೆ ಕಡೆ ಕ್ಲಿಷ್ಟಸನ್ನಿವೇಶಗಳಲ್ಲಿರುವುದು ಮುಖ್ಯವಾದ ಕಾರಣಗಳಾಗಿವೆ. ತಿರುಮಂಗೈ ಆಳ್ವಾರರದೂ ಇದೇ ಅಭಿಪ್ರಾಯ. ದೇವತೆಗಳನ್ನು ಬಿಟ್ಟರೆ ಮತ್ತಾರಿಗೂ ಇಲ್ಲಿ ಹೋಗಲು ಸಾಧ್ಯವಿಲ್ಲ. 'ತೇಯುಂ ಅಲ್ಲಾಲ್ ಶೆಲ್ಲ ಒಣ್ಣ' ಎಂದು ಹೇಳಿ ಇಡಿ ಕ್ಷೇತ್ರವನ್ನೇ 'ಶಿಂಗವೇಳ್‌ಕುನ್ರಂ' ಎಂದು ವರ್ಣಿಸಿದ್ದಾರೆ. ತಿರುನಹರಿಯ ರೆಟ್ಟೈತಿರುಪತಿ, ನಾಂಗೂರಿನ ಪಾರ್ತಂಪಳ್ಳಿ, ತಿರುವೆಳ್ಳಿಯಂಗುಡಿ ಮುಂತಾದವು ಮಾರ್ಗಸಾಧನಗಳ ಕೊರತೆಯಿಂದ ಎಟುಕದ ಕ್ಷೇತ್ರಗಳಾಗಿವೆ. ಶ್ರೀರಂಗ, ಕಂಚಿ, ಮಧುರೈ, ಮದರಾಸು, ತಿರುವನಂತಪುರ ಮುಂತಾದ ಪಟ್ಟಣಗಳಲ್ಲಿ ನಯನಾಜೂಕಾದ ಮಾರ್ಗ ಸಾಧಗಳಿರುವುದರಿಂದ ಈ ಕ್ಷೇತ್ರಗಳು ಅರ್ಥ ಕ್ಷೇತ್ರಗಳಾಗಿಯೂ ಮೆರೆಯುತ್ತಿವೆ. ಸಿರಿಕ್ಷೇತ್ರ ತಿರುಪತಿ ಆಂಧ್ರಪ್ರದೇಶದ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರ ವಹಿಸಿದೆ.

## ಶ್ರೇಷ್ಠತೆ :

ಶ್ರೀರಂಗ ತಿರುಪತಿ, ಕಂಚಿ ಹಾಗೂ ಮೇಲುಕೋಟೆ -- ಇವು ದಿವ್ಯದೇಶ ಚತುಷ್ಟಯ. ಆದರೆ ಪ್ರಾಚೀನ ಸಾಹಿತ್ಯದಲ್ಲಿ ಕಂಚಿ ಮತ್ತು ಮೇಲುಕೋಟೆ ಕ್ಷೇತ್ರಗಳ ಉಲ್ಲೇಖವಿಲ್ಲ. 'ಶಿಲಪ್ಪದಿಕಾರಂ' ಪ್ರಕಾರ ಶ್ರೀರಂಗ, ತಿರುಪತಿ ಮತ್ತು ಅಳಹರ್ ಮಲೈ ಅತ್ಯಂತ ಪ್ರಾಚೀನ ಕ್ಷೇತ್ರಗಳು ಎಂದು ಇದೆ. ತಮಿಳು ಮಹಾಭಾರತದ ಕವಿ ಪೆರುಂದೇವನಾರ್ ಕೂಡ ಹೀಗೆಯೇ ಹೇಳಿದ್ದಾನೆ. ನಂತರ ಬಂದ ತಮಿಳು ಪುರಾಣಗಳಲ್ಲಿ ತಿರುಕ್ಕೋಯಿಲೂರ್, ಪರಮೇಶ್ವರ ವಿಣ್ಣಹರಂ ತಿರುಕಂಡಿಯೂರ್ ಕ್ಷೇತ್ರಗಳ ಉಲ್ಲೇಖವಿದೆ. 'ತಲೈ ಅರಂಗಂ, ಆರಾಮಂ ಶೂಳ್‌ನ್ದ ಅರಂಗಂ' ಎಂದು ಕಲಿಯನರು ಹೇಳಿರುವಂತೆ ಪೆರಿಯಕೋಯಿಲ್, ತಿರುವಾಶಲ್, ಭೋಗಮಂಟಪ ಎಂದು ಪ್ರಸಿದ್ಧಿಯಾದ ಶ್ರೀರಂಗಕ್ಷೇತ್ರವು ಅಗ್ರಸ್ಥಾನದಲ್ಲಿದೆ. ಪೆರಿಯ ಪೆರಿಯಾಳ್ ಪ್ರಸಂಗಕ್ಷೇತ್ರದ ಪರಿಸರ, ಎಲ್ಲಾ ಆಳ್ವಾರರುಗಳು ಮಂಗಳಾಶಾಸನ ಮಾಡಿರುವುದು. ವೈಭವೋತ್ಸವಗಳು, ಭವ್ಯ ಇತಿಹಾಸದ ಹಿನ್ನೆಲೆ ಮುಂತಾದುವು ಕ್ಷೇತ್ರದ ಹಿರಿಮೆಗೆ ಕಾರಣವಾಗಿದೆ. ಈ ಕ್ಷೇತ್ರ ಸೇವಿಸಿದವರಿಗೆ ಎಲ್ಲಾ ದೊಡ್ಡದು, ಎಲ್ಲಾ ಪ್ರಥಮಗಳು ಇಲ್ಲಿಂದಲೇ, ಇದು ಸಿದ್ಧಿಕ್ಷೇತ್ರ ಎಂಬ ಭಾವನೆ ಉಂಟಾಗುವುದು.

ಪ್ರತಿ ದಿವ್ಯಕ್ಷೇತ್ರದ ಹಿನ್ನೆಲೆಯಲ್ಲಿ ಸ್ಥಳಪುರಾಣ ಅಥವ ಮಹಾತ್ಮೆ ಇದೆ. ಉದಾ : ೧) ಅಹೋಬಿಲವೇ ನರಸಿಂಹಾವತಾರವಾದ ಸ್ಥಳವೆಂದೂ, ಶ್ರೀರಾಮ ಹಾಗೂ ಶ್ರೀನಿವಾಸದೇವರುಗಳು ನೃಸಿಂಹನನ್ನು ಸ್ತುತಿಸಿದ್ದರಿಂದ ನೃಸಿಂಹನೂ ಪೆರಿಯ ಪೆರುಮಾಳ್ ಎಂದೂ ಇದೊಂದು ಮುಕ್ತಿ ಕ್ಷೇತ್ರವೆಂದೂ, ೨) ಕಂಚಿಯ ಸಮೀಪವಿರುವ ತಿರುಪ್ಪುಟ್‌ಕುಳಿ ಕ್ಷೇತ್ರದಲ್ಲಿ ಮರಣಾವಸ್ಥೆಯಲ್ಲಿದ್ದ ಜಟಾಯುವಿಗೆ ಶ್ರೀರಾಮನು ಪ್ರಸನ್ನನಾಗಿ ಮೋಕ್ಷ ಅನುಗ್ರಹಿಸಿ ಸಂಸ್ಕಾರ ಕ್ರಿಯೆಗಳನ್ನು ಮಾಡಿದನೆಂದೂ, ೩) ಕಪಿಸ್ಥಲಂ ಗಜೇಂದ್ರಮೋಕ್ಷವಾದ ಕ್ಷೇತ್ರವೆಂದು, ೪) ತಿರುವಳ್ಳೂರ್ ಕ್ಷೇತ್ರದಲ್ಲಿ ಸಾಕ್ಷಾತ್ ರಾವಣನೇ ರಾಮನನ್ನು 'ವೀರರಾಘವ' ಎಂದು ಹೊಗಳಿದನೆಂದೂ, 5) ಅಣ್ಣನ್ ಕೋಯಿಲ್ ಮತ್ತು ತಿರುವಹೀಂದ್ರಪುರದ ದೇವರುಗಳು ಶ್ರೀನಿವಾಸನಿಗೆ ಅಣ್ಣ ಎಂದೂ, ಇನ್ನೂ ಅದ್ಭುತ ಪುರಾಣೋಕ್ತಿಗಳಿವೆ. ಕಾಲಾನುಕಾಲಕ್ಕೆ ಈ ಸ್ಥಳ ಪುರಾಣಗಳಲ್ಲಿ ಉಪಕಥೆಗಳು, ಅಡ್ಡಕಥೆಗಳು ಹೆಣೆದುಕೊಂಡು ಭಕ್ತರಿಗೆ ಹೆಚ್ಚು ಆಕರ್ಷಕವಾಗಿರುವುದಲ್ಲದೆ ಕುತೂಹಲಕಾರಿಯಾಗಿರುವುವು. ನಂಬಿಕೆಗಳು ವಾಡಿಕೆಗಳೂ ಹುಟ್ಟಿಕೊಂಡಿವೆ. ಉದಾ : ತಿರುಪ್ಪುಲ್ಲಾಣಿ (ಸೇತು) ಮಹಾಬಲಿಪುರಂ (ಅರ್ಧಸೇತು) ಕ್ಷೇತ್ರಗಳಲ್ಲಿ ಸಮುದ್ರಸ್ನಾನ ಮಾಡಿ ತಿರುಪತಿಯನ್ನ ಸೇವಿಸುವ ವಾಡಿಕೆ ಇದೆ. "ಕಡಲಾಡಿ ಮಲೆ ಏರ್" ಎಂಬ ನಾಣ್ನುಡಿಯೂ ಇದೆ.

## ದಿವ್ಯಕ್ಷೇತ್ರಗಳಲ್ಲೇನಿದೆ ? :

ಗರ್ಭಗುಡಿ ಹಾಗೂ ವಿಮಾನ ಪ್ರಥಮವಾಗಿ ಕಾಣಿಸಿಕೊಂಡ ದೇವಸ್ಥಾನದ ಭಾಗಗಳು,

ತಾಯಾರ್ ಸನ್ನಿಧಿ, ಆಳ್ವಾರಾಚಾರ್ಯರ ಸನ್ನಿಧಿ, ಯಾಗಶಾಲೆ, ಪಾಕಶಾಲೆ ಉತ್ಸವಮಂಟಪಗಳು, ಪ್ರಾಕಾರಗಳು, ಗೋಪುರಗಳು ನಂತರ ಕಾಣಿಸಿಕೊಂಡ ವಿಭಾಗಗಳು. ದೇವಸ್ಥಾನದ ರಾಜಗೋಪುರ ಹೊರನೋಟಕ್ಕೆ ಬಹಳ ಆಕರ್ಷವಾದ ಭಾಗ. ಶ್ರೀರಂಗ, ಶ್ರೀವಿಲ್ಲಿಪುತ್ತೂರ್, ತಿರುಕೋಯಿಲ್, ಕುಂಭಕೋಣ ಉತ್ತಮ ನಿದರ್ಶನಗಳಾಗಿವೆ. ಐತಿಹಾಸಿಕ ದೃಷ್ಟಿಯಿಂದ ರಾಜರ ಕಾಲನಿರ್ಣಯ ಮಾಡಲು ದೇವಸ್ಥಾನ ನಿರ್ಮಾಣ ಸಹಾಯಕವಾಗಿದೆ. ಕಂಚಿ, ತಿರುಪತಿ ಶ್ರೀರಂಗಗಳಲ್ಲಿ ರಾಜರ ನೆರವಿನಿಂದ ವಿಮಾನಗಳಿಗೆ ಚಿನ್ನದ ರೇಕು ಹಾಕಿಸಿರುವುದನ್ನು ಇತಿಹಾಸದ ಪುಟಗಳಿಂದ ತಿಳಿಯಬಹುದು.

ತಿರುಪತಿಯಲ್ಲಿ ಎಲ್ಲಾ ಉತ್ಸವಗಳು, ಶ್ರೀರಂಗದಲ್ಲಿ ವೈಕುಂಠ ಏಕಾದಶಿ, ಪಂಗುನಿ ಉತ್ತಿರೈ ಹಾಗೂ ಉತ್ಸವಗಳಲ್ಲಿ ವಿವಿಧ ನಡೆಗಳು, ಕಂಚಿ ಗರುಡಸೇವೆ, ತಿರುವಹೀಂದ್ರಪುರದ ಪಡಿ ಉತ್ಸವ, ತಿರುನಹರಿಯ ಪರಮ ಪದೋತ್ಸವ, ತಿರುನರೆಯೂರಿನ ಕಲ್ಲರುಡೋತ್ಸವ, ಮೇಲುಕೋಟೆಯ ವೈರಮುಡಿ ನಾಂಗೂರಿನ ತೈಮಾಸದ ಸಾಮೂಹಿಕ ಉತ್ಸವ ಕೇರಳಾದಲ್ಲಿ ತಿರುಓಣಂ ಮುಂತಾದ ವೈಭವೋತ್ಸವಗಳು ಭಕ್ತರನ್ನು ಹೆಚ್ಚು ಸೆಳೆಯುವುದಲ್ಲದೇ ಕ್ಷೇತ್ರಪ್ರಚಾರ ವರಮಾನದಲ್ಲಿ ಹೆಚ್ಚಳ ವ್ಯಾಪಾರ ಅಭಿವೃದ್ಧಿಗಳಲ್ಲಿ ಸಕ್ರಿಯ ಪಾತ್ರ ವಹಿಸಿವೆ. ಕಂಚಿ ಹಾಗೂ ತಿರುವಹೀಂದ್ರಪುರ ಅಲಂಕಾರಕ್ಕೆ ಪ್ರಸಿದ್ಧಿಯಾದ ಕ್ಷೇತ್ರಗಳು. ವಿವಿಧ ರೀತಿಯ ದೀಪಾಲಂಕಾರ ಕೇರಳದ ದಿವ್ಯಕ್ಷೇತ್ರಗಳ ವೈಶಿಷ್ಟ್ಯ.

ದೇವಸ್ಥಾನಗಳು ಭಗವಂತನ ಅರ್ಚಾವತಾರದ ಕುರುಹು. ಪ್ರತಿಯೊಂದು ಕ್ಷೇತ್ರದ ದೈವವೂ ಭಕ್ತನಿಗೋಸ್ಕರ ಪ್ರತ್ಯಕ್ಷರೂಪದಲ್ಲಿ ಪ್ರತಿಷ್ಠಿತವಾಗಿರುತ್ತೆ. ಮೂಲ ಹಾಗೂ ಉತ್ಸವಮೂರ್ತಿಗಳ ವಿವಿಧ ಭಂಗಿಗಳು ಆಸನಗಳು, ಅರ್ಚಾಸೊಬಗು, ವಿವಿಧ ಆಯುಧಗಳ ವಿನ್ಯಾಸ ದಿವ್ಯಾಭರಣಗಳು ಸಂತಭಕ್ತರನ್ನು ಆಕರ್ಷಿಸಿರುವುದಲ್ಲದೇ, ಅವರನ್ನು ದೀರ್ಘ ಗಾಯಕರನ್ನಾಗಿ ಮಾಡಿವೆ. ಸ್ವರ್ಣ, ಬೆಳ್ಳಿ, ಹಿತ್ತಾಳಿ, ತಾಮ್ರ ಹಾಗೂ ಪಂಚಲೋಹದ ಮೂರ್ತಿಗಳು, ಸ್ನಪನ ಹಾಗೂ ಬಲಿಬೇರಗಳು, ದಾರು, ಶಿಲೆ, ಮಣ್ಣುಗಾರೆ ಮಿಶ್ರಿತ (ಸುಧಾಮೂರ್ತಿ) ವಾದ ಮೂಲ ಬೇರಗಳನ್ನು ನೋಡಬಹುದು. ಸುಧಾಮೂರ್ತಿಗಳು ದೈನಂದಿನ ಸ್ನಾನಕ್ಕೆ ಅನರ್ಹವಾದ್ದರಿಂದ 'ತೈಲಕಾಪ್' ಎಂಬ ವಿಧಿ ಇದೆ. ಸಾಲಗ್ರಾಮ ಶಿಲಾಮೂರ್ತಿಗಳೂ ಇವೆ. ತಿರುವನಂತಪುರದ ದೇವರು, ತಿರುವಾಟ್ಟಾರ್‌ನ ಆದಿಕೇಶವಸ್ವಾಮಿ ಅತ್ಯಂತ ದೊಡ್ಡದಾದ ಶಯನೀಯ ಮೂರ್ತಿಗಳು. ಕುಂಭಕೋಣದ ಆರಾವಮುದನ್ ಉದ್ಯೋಗಶಯನ (ಶಯನ ಹಾಗೂ ಏಳುತ್ತಿರುವ) ಭಂಗಿಯಲ್ಲಿದೆ. ನಿಂತಿರುವ ಮೂರ್ತಿಗಳ ಪೈಕಿ ಕಂಚಿಯ ಉಲಹಳಂದ ಪೆರುಮಾಳ್ ಎತ್ತರವಾದ್ದು. ಆದರೆ ಎಲ್ಲಕ್ಕಿಂತ ಎತ್ತರವಾದ ಮೂರ್ತಿ ಕುಳಿತಿರುವ ಪಾಂಡವಧೂತರ್ (ಕಂಚಿ) ಅತ್ಯಂತ ಕಿರಿದಾದ ಮೂಲಮೂರ್ತಿ ಅಹೋಬಿಲದ ಉಗ್ರನರಸಿಂಹ. ತಮಿಳುನಾಡಿನ ಅನೇಕ ದಿವ್ಯಕ್ಷೇತ್ರಗಳಲ್ಲಿ ಕಿರಿದಾದ ಸಂತಾನಕೃಷ್ಣಮೂರ್ತಿಯಿದೆ. ಸಂತಾನ ಹೀನರಿಗಾಗಿ ಪ್ರತ್ಯೇಕಸೇವೆಯೂ ಇದೆ.

## ಕಲೆ :

ದಿವ್ಯಕ್ಷೇತ್ರಗಳು ಚಿತ್ರಕಲೆ ಹಾಗೂ ಶಿಲ್ಪಕಲೆಗಳನ್ನು ಪ್ರತಿಬಿಂಬಿಸುವ ಕಲಾಮಂದಿರಗಳಾಗಿವೆ. ರಾಜಗೋಪುರಗಳಲ್ಲಿ ದಶಾವತಾರದ ಮೂರ್ತಿಗಳು ಎರಡೂ ಕಡೆಗಳಲ್ಲಿ ದಿಗ್‌ಮೂರ್ತಿಗಳು, ವ್ಯಾಳಿ, ಒಳಪ್ರಕಾರಗಳಲ್ಲಿ ಮಂಟಪಗೋಡೆ, ಕಂಭಗಳಲ್ಲಿ ರಾಮಾಯಣ -- ಮಹಾಭಾರತಗಳಲ್ಲಿ ಬರುವ ಪ್ರಮುಖ ಘಟನೆಗಳ ಶಿಲ್ಪಕೃತಿ ಕ್ಷೇತ್ರಕ್ಕೆ ಸೊಬಗನ್ನು ಕೊಡುವಂಥಾದ್ದಾಗಿವೆ. ತಿರುಕ್ಕುರಂಗುಡಿ, ಶ್ರೀವಿಲ್ಲಿಪುತ್ತೂರ್‌ಗಳಲ್ಲಿ ಶರಭಸಿಂಹ, ಗಂಡಭೇರುಂಡ, ಅಶ್ವಾರೋಹಿ ದುಷ್ಟರನ್ನು ಕೊಲ್ಲುತ್ತಿರುವುದು ಉತ್ತಮ ನಿದರ್ಶನಗಳಾಗಿವೆ. ಭಾರತದ ವಾಸ್ತುಶಿಲ್ಪಕ್ಕೆ ಪಲ್ಲವರ ಕೊಡುಗೆ ಅಪಾರವಾದುದು. ಮಹಾಬಲಿಪುರಂ ಹಾಗೂ ಪರಮೇಶ್ವರ ವಿಣ್ಣಹರಂ ಉತ್ತಮ ಉದಾಹರಣೆಗಳಾಗಿವೆ. ಕುಂಚಕಲಾಚಾರ್ಯ ರವಿವರ್ಮನಿಂದ ಅನಂತಪದ್ಮನಾಭಸ್ವಾಮಿ ದೇವಸ್ಥಾನದಲ್ಲಿ ಗೋಡೆ ಹಾಗೂ ಗಾಜು-ಕನ್ನಡಿಗಳ ಮೇಲೆ ತೈಲಚಿತ್ರ ಪ್ರಾರಂಭವಾಯಿತು. ಮದುರೈನ ಮೂರು ದಿವ್ಯಕ್ಷೇತ್ರಗಳಲ್ಲಿ ೧೦೮ ದಿವ್ಯದೇಶಗಳ ಮೂರ್ತಿ ಚಿತ್ರಗಳನ್ನು ಗೋಡೆಗಳ ಮೇಲೆ ನೋಡಬಹುದು. ತಿರುಪುಳಿಯಂಗುಡಿಯ ಭೂಮಿಪಾಲನ್ ಮೂರ್ತಿಯನ್ನು ಹಾಗೂ ತಿರುವೆಳ್ಳರೈನ ಶಿಲ್ಪಕಲೆಯನ್ನು ಬೇಲೂರು ಶಿಲ್ಪಕೃತಿಗೆ ಹೋಲಿಸಬಹುದು. ತಿರುಮಯ್ಯಂ, ದರ್ಭಶಯನಂ (ತಿರುಪುಲ್ಲಾಣಿ) ಶಯನ ಮೂರ್ತಿಗಳನ್ನು ನೋಡಿದರೆ ನಮ್ಮಲ್ಲಿ ಮುಕ್ಕೋಟಿ ದೇವತೆಗಳ ಕಲ್ಪನೆ ಮೂಡುವುದು. ತಿರುಕೋಷ್ಟಿಯೂರ್ ಹಾಗೂ ಉತ್ತಮರ್‌ಕೋಯಿಲ್‌ನಲ್ಲಿ ತ್ರಿಮೂರ್ತಿಗಳ ಸನ್ನಿಧಿ ಇದೆ. ಒಂದೇ ಸನ್ನಿಧಿಯಲ್ಲಿ ತ್ರಿಮೂರ್ತಿಗಳಿರುವ ಅನಂತಶಯನಕ್ಷೇತ್ರ ಯಾವಾಗಲೂ ಶುದ್ಧವಾಗಿರುವುದು.

## ಭವ್ಯ ಇತಿಹಾಸ :

ಎಲ್ಲಾ ದಿವ್ಯಕ್ಷೇತ್ರದ ಹಿನ್ನೆಲೆಯಲ್ಲಿ ಭವ್ಯ ಇತಿಹಾಸವಿದ್ದೇ ಇದೆ. ಆಯಾಯ ಕಾಲದ ರಾಜಮಹಾರಾಜರು ಅವರವರ ಆಚಾರ್ಯರ ಉಪದೇ



## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರ ಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನಶೀಲತೆಯ, ತತ್ತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಿ. ಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ಶದಂತೆ ಗುಡಿಗೋಪುರಗಳನ್ನು ಪ್ರಾಕಾರಗಳನ್ನು ಕಟ್ಟಿಸಿ ದೇವಸ್ಥಾನದ ಹೆಸರಿನಲ್ಲಿ ಭೂಮಿ ಧನ ಸಂಪತ್ತುಗಳನ್ನು ಯಥೇಚ್ಛವಾಗಿ ಕೊಟ್ಟು ಉಪಕರಿಸಿದ್ದಾರೆ. ದಕ್ಷಿಣಭಾರತದ ದಿವ್ಯಕ್ಷೇತ್ರದ ಅಭಿವೃದ್ಧಿಯಲ್ಲಿ ವಿಜಯನಗರದರಸರು, ಮೈಸೂರು ಅರಸರು, ಚೋಳರು, ಪಾಂಡ್ಯರು ಪಲ್ಲವರು ಹಾಗೂ ತಿರುವಾಂಕೂರಿನ ದೊರೆಗಳು ಕಾರಣರಾಗಿದ್ದಾರೆ. ಶ್ರೀರಂಗ, ತಿರುವೆಳ್ಳರೈ, ಅಹೋಬಿಲ ಇನ್ನೂ ಅನೇಕ ಕ್ಷೇತ್ರಗಳಲ್ಲಿ ಶಿಥಿಲವಾಗಿರುವ ರಾಜಗೋಪುರ ಪ್ರಾಕಾರಗಳನ್ನು ನೋಡಿದರೆ ಅವು ಇತಿಹಾಸದಲ್ಲಿ ಜರುಗಿದ ಕಹಿ ಪ್ರಸಂಗಗಳು ಎಂದು ತಿಳಿದುಬರುತ್ತದೆ.

### ಇತರ ವಿಷಯಗಳು :

ದೈನಂದಿನ ಕಾರ್ಯಗಳಲ್ಲಿ ಕ್ಷೇತ್ರ ಕ್ಷೇತ್ರಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿವೆ. ತಿರುಪತಿಯೂ ಸೇರಿ ಕೆಲವೇ ಕ್ಷೇತ್ರಗಳಲ್ಲಿ ವೈಖಾನಸ ಆಗಮದ ಪದ್ಧತಿ ಇದೆ. ಇನ್ನು ಮಿಕ್ಕ ಕ್ಷೇತ್ರಗಳಲ್ಲಿ ಪಾಂಚರಾತ್ರಾಗಮ ಪದ್ಧತಿ ಇದೆ. ತುಳು ಸಂಪ್ರದಾಯ ಪ್ರಧಾನವಾದ ಕೇರಳದ ದಿವ್ಯಕ್ಷೇತ್ರಗಳು ಈ ಎರಡೂ ಪದ್ಧತಿಯಿಂದ ಹೊರತಾಗಿವೆ. ಇಲ್ಲಿಯ ಅರ್ಚಕ -- ಪರಿಚಾರಕ ವರ್ಗದವರ ದೋಷರಹಿತವಾದ ಹಾಗೂ ದಕ್ಷಕಾರ್ಯ ನಿರ್ವಹಣೆ ಕಟ್ಟುನಿಟ್ಟಾದ ಪೂಜಾವಿಧಿಗಳು ಇತರರಿಗೆ ಆದರ್ಶವಾಗಿದೆ. ಉತ್ತರ ಭಾರತದ ಅನೇಕ ದಿವ್ಯಕ್ಷೇತ್ರಗಳಲ್ಲಿ ವಲ್ಲಭ ಸಂಪ್ರದಾಯ ಜಾರಿಯಲ್ಲಿದೆ. ಬದರಿಯಲ್ಲಿ ಅರ್ಚಕ ವರ್ಗದವರು ನಂಬೂದ್ರಿಗಳು. ಸ್ವಾಮಿತ್ವ ಹಾಗೂ ಆಡಳಿತದ ಬಗ್ಗೆ ಹೇಳುವುದಾದರೆ ತಿರುಪತಿಯಂಥಾ ಕೆಲವೇ ಕ್ಷೇತ್ರಗಳಲ್ಲಿ ವಿಶ್ವಸ್ಥಮಂಡಳಿ (Trust) ವ್ಯವಸ್ಥೆಯನ್ನು ನೋಡಬಹುದು. ಕೇರಳದಲ್ಲಿ ದೇವಸ್ವಂ ಮಂಡಳಿ (ಅನಂತಪದ್ಮನಾಭಸ್ವಾಮಿ ಕ್ಷೇತ್ರ ಹೊರತಾಗಿದೆ) ಕರ್ನಾಟಕ, ತಮಿಳುನಾಡು ಆಂಧ್ರಪ್ರದೇಶಗಳಲ್ಲಿ ಸರ್ಕಾರಿ ಮುಜರಾಯಿ--ಧರ್ಮದತ್ತಿ ಇಲಾಖೆಗಳ ವತಿಯಿಂದ ನಡೆಯುವ ದಿವ್ಯಕ್ಷೇತ್ರಗಳು ಯಥೇಚ್ಛವಾಗಿವೆ.

ಮಾನವನ ಇಷ್ಟಾರ್ಥ ಪ್ರಾಪ್ತಿ ಹಾಗೂ ಅನಿಷ್ಟನಿವೃತ್ತಿಗಳ ಮೂಲಕ ಸುಖ ಶಾಂತಿಗಳನ್ನು ಸಾಧಿಸಲು ಈ ದಿವ್ಯದೇಶಗಳು ಪ್ರಮುಖ ಸಾಧನವಾಗಿದೆ. ಭಗವಂತ ಸಾಯುಜ್ಯಾದಿಗಳು ಎಲ್ಲರಿಗೂ ದೊರಕಲಿ ಎಂಬ ಸದುದ್ದೇಶದಿದ ಆಳ್ವಾರುಗಳು ಶ್ರಮಿಸಿದ್ದಾರೆ. ಭಗವದ್ರಾಮಾನುಜರ ವಾಣಿಯೂ ಇದೇ.

--ಆಳ್ವಾರರಡಿದಾವರೆಗಳಲ್ಲಿ ಶರಣು--



# ವಾದಿರಾಜರು ಚಿತ್ರಿಸಿದ ಶ್ರೀಕೃಷ್ಣಕ್ಷೇತ್ರ

ದ್ವಾರಕಾಧೀಶನಾದ ಶ್ರೀಕೃಷ್ಣಪ್ರಭುವನ್ನು ೮ ಶತಮಾನಗಳ ಹಿಂದೆ, ಶ್ರೀಕ್ಷೇತ್ರ ಉಡುಪಿಯಲ್ಲಿ ಪ್ರತಿಷ್ಠೆಗೈದ ಶ್ರೀಮದಾಚಾರ್ಯರು, ಕಡೆಗೋಲ ಕೃಷ್ಣನ ಪೂಜೆ ನಿರಂತರ ನಡೆಯಲು, ೮ ಜನ ವಟುಗಳಿಗೆ ಯತಿದೀಕ್ಷೆಯನ್ನಿತ್ತು, ಅವರಿಗಾಗಿ ೮ ಮಠಗಳನ್ನು ನಿರ್ಮಿಸಿದರು.

ಕನಕನ ಕಿಂಡಿ ಮತ್ತು ಪರ್ಯಾಯ ಸಂಕಲ್ಪ :-- ಕಾಗಿನಲೆ, ತಿರುಮಲೆ, ಶ್ರೀರಂಗ ಹಾಗೂ ಉಡುಪಿ ಕ್ಷೇತ್ರಗಳ ಸಂಚಾರದಲ್ಲಿ ಸದಾ ನಿರತರಾಗಿದ್ದ ಕನಕದಾಸರು, ಶ್ರೀಕೃಷ್ಣಾನುಗ್ರಹ ಪ್ರಾಪ್ತಿಗಾಗಿ, ಒಮ್ಮೆ ಉಡುಪಿಯಲ್ಲಿ ಬಹುಕಾಲ ನಿಲ್ಲುವರು. ಅವರ ಅಮರ ಭಕ್ತಿಗೆ ಒಲಿದ ಶ್ರೀಕೃಷ್ಣಪ್ರಭು, ಗೋಡೆ ಒಡೆದು ಕನಕನಿಗೆ ದರ್ಶನ ನೀಡುವನು. ಈ ಜಾಗದಲ್ಲಿ ವಾದಿರಾಜರು ಕಿಟಕಿಯೊಂದನ್ನು ಇಡಿಸುತ್ತಾರೆ. ಅದು ಕನಕನ ಕಿಂಡಿ ಎಂದೇ ಪ್ರಸಿದ್ಧವಾಗಿದೆ. ಪರ್ಯಾಯ ಪೀಠವನ್ನೇರಲು ವಿಶೇಷ ಮೆರವಣಿಗೆಯಲ್ಲಿ ಹೊರಟ ಸ್ವಾಮಿಗಳು ರಥಬೀದಿಗೆ ಬಂದ ಬಳಿಕ ಮೊದಲು ಕನಕನ ಕಿಂಡಿಯಿಂದ ಶ್ರೀಕೃಷ್ಣ ದರ್ಶನ ಮಾಡುವರು. ಆ ಬಳಿಕ ಅಲ್ಲೇ ನಿಂತು ಪರ್ಯಾಯ ನಿರ್ವಿಘ್ನವಾಗಿ ನಡೆಯುವಂತೆ, ನವಗ್ರಹ ಪೂಜಾದಿಗಳನ್ನು ಮಾಡಿ, ಬ್ರಾಹ್ಮಣರಿಗೆ ದಾನ ದಕ್ಷಿಣೆಗಳನ್ನು ನೀಡಿ, ದೇವರ ಮುಖ ಮಂಟಪಕ್ಕೆ ಬಂದು, ಶ್ರೀಕೃಷ್ಣನಿಗೆ ಆರತಿ ಮಾಡಿ ಪರಂಪರಾಗತವಾಗಿ ಬಂದ ಅಕ್ಷಯಪಾತ್ರೆ, ಪಾಕಸಟ್ಟುಗ್ಗೆ, ಶ್ರೀಕೃಷ್ಣನ ಗರ್ಭಗುಡಿಯ ಬೀಗದ ಕೈಗಳನ್ನು ಮದ್ವಾಚಾರ್ಯರ ಸಮ್ಮುಖದಲ್ಲಿ ಪರ್ಯಾಯ ಪೀಠ ಬಿಟ್ಟೇಳಲಿರುವ ಸ್ವಾಮಿಗಳಿಂದ ಸ್ವೀಕರಿಸಿ, ವಿದ್ವಾಂಸರ, ಪುರೋಹಿತರ ಸಮ್ಮುಖದಲ್ಲಿ ಸರ್ವಜ್ಞ ಪೀಠದಲ್ಲಿ ಆಸೀನರಾಗುತ್ತಾರೆ. ಇದೀಗ ಪುತ್ತಿಗೆ ಮಠದ ಮೂಲ ಯತಿಗಳಾದ ಉಪೇಂದ್ರ ತೀರ್ಥ ಸಂಸ್ಥಾನದ ಪ್ರಸಕ್ತ ಸ್ವಾಮಿಗಳಾದ ಶ್ರೀ ಶ್ರೀ ಸುಗುಣೇಂದ್ರತೀರ್ಥ ಶ್ರೀಪಾದರಿಂದ, ಶಿರೂರು ಮಠದ ಮೂಲ ಯತಿಗಳಾದ ವಾಮನ ತೀರ್ಥ ಸಂಸ್ಥಾನದ ೩೦ ನೇ ಸ್ವಾಮಿಗಳಾದ ಶ್ರೀ ಲಕ್ಷ್ಮೀವರ ತೀರ್ಥರು ೧೮-೧-೯೪ ರಂದಿನ, ಪ್ರಾತಃಕಾಲದಿಂದ ಮುಂದೆರಡು ವರ್ಷಗಳ ವರೆಗೆ ಶ್ರೀಕೃಷ್ಣ ಮಠದ ಆಡಳಿತ ಹಾಗೂ ಶ್ರೀಕೃಷ್ಣನ ಪೂಜಾ ಕೈಂಕರ್ಯಾದಿಗಳನ್ನು ನಡೆಸಲು ಅಧಿಕಾರವನ್ನು ಹೊಂದಿದ್ದಾರೆ.

ಶ್ರೀಕೃಷ್ಣಮಠದಲ್ಲೊಂದು ದಿನ:-- ಶ್ರೀಕೃಷ್ಣ ಮಠದಲ್ಲಿ ನಡೆಯುವ ಪೂಜಾವಿಧಾನ, ಸಂಪ್ರದಾಯ, ಪ್ರಾಯಃ ಭಾರತದ ಬೇರಾವ ಆಲಯಗಳಲ್ಲೂ ಇರಲಾರದು. ಕಾಲಕಾಲಕ್ಕೆ ಪೂಜೆಗಳು ಕ್ರಮ ಹಾಗೂ ಶಿಸ್ತುಬದ್ಧವಾಗಿ ಆಚಾರ್ಯ ಮಧ್ವರು; ವಾದಿರಾಜರು ವಿಧಿಸಿದ ಕಟ್ಟಳೆಯಂತೆ ಅಷ್ಟ ಮಠದ ಯತಿಗಳಿಂದ ನಡೆಯುತ್ತದೆ. ಬೆಳಿಗ್ಗೆ ಸುಮಾರು ೫-೩೦ ರಿಂದ ೧೧-೩೦ ರ ವರೆಗೆ ಒಂದರ ಹಿಂದೆ ಒಂದು ಪೂಜೆ ನಿರಂತರ ನಡೆಯುತ್ತಿರುತ್ತದೆ. ಅವುಗಳಲ್ಲಿ ಪ್ರಮುಖವೆಂದರೆ : ೧) ನಿರ್ಮಾಲ್ಯ ವಿಸರ್ಜನ ಪೂಜೆ, ೨) ಉಷಃಕಾಲ ಪೂಜೆ, ೩) ಗೋಪೂಜೆ, ೪) ವಿಶ್ವರೂಪದರ್ಶನ, ೫) ಪಂಚಾಮೃತ ಪೂಜೆ, ೬) ಉದಾರ್ತನ ಪೂಜೆ, ೭) ಕಲಶ ಪೂಜೆ, ೮) ತೀರ್ಥಪೂಜೆ, ೯) ಅಲಂಕಾರ ಪೂಜ, ೧೦) ಅವಸರ ಸನಕಾದಿಪೂಜೆ, ೧೧) ಮಹಾಪೂಜೆ, ಆ ಬಳಿಕ ಮಧ್ಯಾಹ್ನ ೪-೩೦ ಕ್ಕೆ ಪುರಾಣವಾಚನ, ರಾತ್ರಿ ೭ ರಿಂದ ೯ರ ವರೆಗೆ ನಡೆಯುವ ಪ್ರಮುಖ ಪೂಜೆಗಳೆಂದರೆ : ೧) ಚಾಮರ ಪೂಜೆ, ೨) ರಾತ್ರಿ ಪೂಜೆ, ೩) ಆಂಜನೇಯನಿಗೆ ರಂಗಪೂಜೆ, ೪) ಉತ್ಸವಕಾಲದಲ್ಲಿ ವಿವಿಧ ರಥೋತ್ಸವಗಳು, ೫) ತೊಟ್ಟಿಲು ಪೂಜೆ ಮತ್ತು ಅಷ್ಟಾವಧಾನ ಸೇವೆ, ೬) ಕೊಳಲು ಸೇವೆ, ೭) ಶಯನೋತ್ಸವ (ಏಕಾಂತಸೇವೆ).

ಶ್ರೀಕೃಷ್ಣನ ಪರ್ಯಾಯ ಪೂಜಾಕ್ರಮವನ್ನು ೨ ತಿಂಗಳಿಂದ ೨ ವರ್ಷಕ್ಕೆ ವಿಸ್ತರಿಸಿದವರು ವಾದಿರಾಜರು. ಅದು ಮಾತ್ರವಲ್ಲದೆ ಮಧ್ಯಾಹ್ನದ ಪ್ರಮುಖ ಪೂಜೆಯಾದ, ಮಹಾಪೂಜೆಯನ್ನು ರಾತ್ರಿಯ ಪ್ರಮುಖ ಪೂಜೆಯಾದ ಚಾಮರ ಪೂಜೆಯನ್ನು ಪರ್ಯಾಯ ಶ್ರೀಗಳೇ ನಡೆಸಬೇಕೆಂದು ವಾದಿರಾಜರು ಕಟ್ಟಳೆ ಮಾಡಿರುತ್ತಾರೆ. ಇತರೆಲ್ಲಾ ಪೂಜೆಗಳನ್ನು ಚಿಕ್ಕ ಪಟ್ಟಕ್ಕೆ ನಿಂತ ಇತರ ಅಷ್ಟ ಮಠದ ಯತಿಗಳು ಮಾಡಬಹುದು. ವಾದಿರಾಜರಿಂದ ನಿರ್ಣೀತವಾದ ಈ ನಿಯಮ, ಇಂದಿಗೂ ಕೊಂಚವೂ ವ್ಯತ್ಯಾಸವಿಲ್ಲದೆ ನಡೆದು ಬರುತ್ತಿದೆ.

ಯತಿಶೇಖರ ವಾದಿರಾಜಗುರು ಸಾರ್ವಭೌಮರು ಅಪ್ರತಿಮ ಪಂಡಿತರು, ಮಹಾನ್ ಆಡಳಿ



**SRI KRISHNA TEMPLE, UDIPI**

**The seven hundredth Anniversary of the installation of the Deit was celebrated on a grand scale at Udipi in January last**

ತಗಾರರು, ಸಮಾಜ ಸುಧಾರಕರು, ಸ್ವಷ್ಟ ಚಿಂತನ ಶೀಲರು ಆಗಿದ್ದು ವ್ಯಾಸರಾಜ, ಪುರಂದರ ಹಾಗೂ ಕನಕದಾಸರ ಸಮಕಾಲೀನರು, ಶಾರ್ವರಿ ಸಂವತ್ಸರದ ಮಾಘಶುದ್ಧ ದ್ವಾದಶಿಯಂದು, (ಕ್ರಿ.ಶ. ೧೪೮೦) ಹೂವಿನ ಕೆರೆಯಲ್ಲಿ ಜನಿಸಿದ ವಾದಿರಾಜರು ಸಂವತ್ಸರಗಳ ಎರಡು ಪೂರ್ಣ ಋತು ಚಕ್ರಗಳನ್ನು ಕಂಡು, ಪುನಃ ಅದೇ ಸಂವತ್ಸರದ, ಫಾಲ್ಗುಣ ಬಹುಳ ತದಿಗೆಯಂದು, (ಕ್ರಿ.ಶ. ೧೬೦೦), ಸಿರ್ಸಿಯಿಂದ ೧೬ ಕಿ.ಮೀ. ದೂರದಲ್ಲಿರುವ ಸೋದೆಯಲ್ಲಿ ಸಶರೀರ ವೃಂದಾವನ ಪ್ರವೇಶಗೈದರು. ಇವರ ಸಂಸ್ಕೃತ ಕೃತಿಗಳಲ್ಲಿ ೬೭ ಗ್ರಂಥಗಳು ಈಗ ಉಪಲಬ್ಧವಿವೆ. ಇವರ ಕಾವ್ಯ ಗ್ರಂಥಗಳಲ್ಲಿ ಪ್ರಮುಖವಾದುದೆಂದರೆ ೧) ರುಕ್ಮಿಣೀಶ ವಿಜಯ, ೨) ಸರಸಭಾರತೀ ವಿಲಾಸ, ೩) ತೀರ್ಥಪ್ರಬಂಧ. ಇವಲ್ಲದೆ ವಾದಿರಾಜರು ಹಯವದನ ಮುದ್ರಿಕೆಗಳನ್ನೊಳಗೊಂಡ ಸಾವಿರಾರು ಕನ್ನಡ ಗೀತೆಗಳನ್ನು ನಿತ್ಯೋಪಯೋಗಕ್ಕಾಗಿ ರಚಿಸಿದ್ದಾರೆ. ಈ ಗೀತೆಗಳು ಅಪೂರ್ವವಾಗ್ವಿಲಾಸ ಹಾಗೂ ಮಂತ್ರಶಕ್ತಿಗಳಿಂದ ಕೂಡಿವೆ. ಪ್ರವಾಸ ಸಾಹಿತ್ಯದಲ್ಲೇ ಮೇರುಕೃತಿಯಾದ ವಾದಿರಾಜರು ರಚಿಸಿದ ತೀರ್ಥಪ್ರಬಂಧದಲ್ಲಿ ತನ್ನ ಆರಾಧ್ಯದೈವ ಉಡುಪಿ ಕೃಷ್ಣನಿಗೆ ಪ್ರದಕ್ಷಿಣಾಕಾರವಾಗಿ, ಸಂಚರಿಸುತ್ತಾ ದಕ್ಷಿಣದ ಕನ್ಯಾಕುಮಾರಿಯಿಂದ, ಉತ್ತರದ ಬದರಿವರೆಗೆ, ಪಶ್ಚಿಮದ ದ್ವಾರಕೆಯಿಂದ, ಪೂರ್ವದ ಪುರಿಯವರೆಗೆ ಇರುವ ಭಾರತದ ಪ್ರಮುಖ ಹಾಗೂ ಪವಿತ್ರ ೧೧೭ ಕ್ಷೇತ್ರ, ನದಿ, ಪರ್ವತಗಳನ್ನು ಶ್ರುತಿ ಸ್ಮೃತಿಗಳಿಗನುಸಾರವಾಗಿ ವರ್ಣಿಸುತ್ತಾರೆ. ತಮ್ಮ ಕಾರ್ಯಕ್ಷೇತ್ರವಾದ ಉಡುಪಿ ಹಾಗೂ ಆರಾಧ್ಯದೈವ ಉಡುಪಿ ಶ್ರೀಕೃಷ್ಣಪ್ರಭುವನ್ನು ೭ ಶ್ಲೋಕಗಳಿಂದ ವರ್ಣಿಸುತ್ತಾರೆ.

೧. ಅಪ್ರತಿಮವಾದ ರಜತ ಪೀಠ :-- "ಕಾಶೀತಲೇ ಕೃತ ಪದಾಪಿ ಸರಿತ್ಸುರಾಣಾ" ಎಂಬ ಶ್ಲೋಕದಲ್ಲಿ ವಾದಿರಾಜರು, ದೇವ ನದಿಯಾದ ಗಂಗೆಯು ಕಾಶೀಕ್ಷೇತ್ರದಲ್ಲಿದ್ದರೂ ಶ್ರೀಮದಾಚಾರ್ಯರ ಸ್ನಾನಕ್ಕಾಗಿ, ದೇವರಿಂದ ಆಜ್ಞಪ್ತಳಾಗಿ, ಮಧ್ವ ಸರೋವರಕ್ಕೆ ಬಂದಿದ್ದಳು. ಮಹಾ ಸ್ಮಶಾನವೆಂದು ಹೆಸರಾದ, ಕಾಶಿಯಲ್ಲಿ ರುದ್ರದೇವರು ಮಾತ್ರವಿದ್ದರೆ, ಉಡುಪಿಯಲ್ಲಿ ಚಂದ್ರನಿಗೆ ವರವಿತ್ತ ಚಂದ್ರೇಶ್ವರ, ಶ್ರೀ ಮದಾಚಾರ್ಯರಿಂದ ಪ್ರತಿಷ್ಠಿತ ಬಾಲಕೃಷ್ಣನಿದ್ದಾನೆ. ಆದ ಕಾರಣ ರಜತ ಪೀಠಪುರ ೩ ಲೋಕಗಳಲ್ಲಿ ಅಪ್ರತಿಮವಾದುದು ಎಂದು ವಾದಿರಾಜರು ತರ್ಕಬದ್ಧವಾಗಿ ನಿರೂಪಿಸುತ್ತಾರೆ.

೨. ಪರ್ಯಾಯ ಅರ್ಚಕರಾದ ತಪಸ್ವಿ ಬಾಲಯತಿಗಳು :-- ಉಡುಪಿ ಕ್ಷೇತ್ರದಲ್ಲಿ ಶ್ರೀ ಬಾಲಕೃಷ್ಣನ ಪರ್ಯಾಯ ಅರ್ಚನೆಗಾಗಿ ೮ ಮಂದಿ ಯತಿಗಳಿದ್ದಾರೆ. ಇವರಲ್ಲಿ ಒಬ್ಬೊಬ್ಬರೂ, ಅಷ್ಟದಿಕ್ಪಾಲಕರಲ್ಲಿರುವ ಎಲ್ಲಾ ಗುಣ ಲಕ್ಷಣಗಳನ್ನು ಹೊಂದಿರುತ್ತಾರೆ. ಇವರು ಅಗ್ನಿಯಂತೆ ಎಲ್ಲಾ ಪಾಪರಾಶಿಗಳನ್ನು ಸುಡಬಲ್ಲವರು. ಯಮನಂತೆ ದಂಡಧಾರಿಗಳು, ವರುಣನು ಪಾಶಧಾರಿಯಾಗಿದ್ದರೆ, ಇವರು ಶ್ರೀಕೃಷ್ಣ ಭಕ್ತಿ ಎಂಬ ಪಾಶಧಾರಿಗಳಾಗಿದ್ದಾರೆ. ವಾಯುವು ಚಲನೆಯಿಂದ ಶ್ರಮ ನಿವಾರಿಸುವಂತೆ, ಇವರು ತಮ್ಮ ಅನುಗ್ರಹ ಬಲದಿಂದ ಶಿಷ್ಯರ ಸಂಸಾರ ತಾಪತ್ರಯಗಳನ್ನು ನಿವಾರಿಸುತ್ತಾರೆ. ಮೇಲಾಗಿ ಇವರು ಚಂದ್ರನಂತೆ ಶಾಂತಶೀಲರು, ಶಿವನಂತೆ ವಿರಕ್ತರು, ಏಕಾದಶಿ ಮುಂತಾದ ಅನಶನ ವ್ರತ ನಿಷ್ಠರು, ಶ್ರೀಕೃಷ್ಣನಲ್ಲಿ ವಿಶೇಷ ಜ್ಞಾನ ಭಕ್ತಿಗಳನ್ನು ಹೊಂದಿದವರು, ಶಮದಮಾದಿ ಸದ್ಗುಣ ಭರಿತರು ಹಾಗೂ ಶಾಂತಚಿತ್ತರು. ಇಂದ್ರನು ವಜ್ರಾಯುಧವನ್ನು ಹೊಂದಿದ್ದರೆ, ಇವರು ಜ್ಞಾನವೆಂಬ ವಜ್ರಕವಚ ಧರಿಸಿ, ಅಷ್ಟದಿಕ್ಪಾಲಕರಂತೆ ಉತ್ಕೃಷ್ಟವಾಗಿದ್ದಾರೆ ಎಂದು ಅಪ್ಪಣೆ ಕೊಡಿಸಿದ್ದಾರೆ.

೩. ದ್ವಾರಕೆಯಿಂದ ಬಂದ ಕಡೆಗೋಲ ಕೃಷ್ಣ ಸಕಲ ಸಂಪದ್ಭರಿತವಾದ ದ್ವಾರಕೆಯಲ್ಲಿ ಸುಂದರಿಯರಾದ ಗೋಪಿಯರಿಂದ ಅರ್ಚಿತನಾದ ಶ್ರೀಕೃಷ್ಣನು, ಮಾವನ ಬೀಡಾದ ಸಾಗರದಲ್ಲೂ ಇರಲೊಲ್ಲದೆ ಸಾಗರವನ್ನು ಉಲ್ಲಂಘಿಸಿ, ಆಚಾರ್ಯ ಮಧ್ವರ ಭಕ್ತಿಗೊಲಿದು, ಪಾವನವಾದ ರಜತ ಪೀಠದಲ್ಲಿ ನೆಲಸಿದ್ದಾನೆ ಎಂದು ವಾದಿರಾಜರು ವರ್ಣಿಸುತ್ತಾರೆ.

೪. ರಜತಾದ್ರಿಗಿಂತ ಶ್ರೇಷ್ಠವಾದ ರಜತಪೀಠ :-- ಈ ಭರತ ಖಂಡದಲ್ಲಿ ದೇವ ನಿರ್ಮಿತವಾದ ಅನೇಕ ಕ್ಷೇತ್ರಗಳಿವೆ. ಕೈಲಾಸವು ರಜತಮಯವಾದ್ದರಿಂದ ಅದು ಬೇರೆ ಕ್ಷೇತ್ರಗಳಿಗಿಂತ ಶ್ರೇಷ್ಠ ಎಂದು ಬೇರೆ ಹೇಳಬೇಕಾಗಿಲ್ಲ. ಆದರೆ ಬೆಳ್ಳಿಬೆಟ್ಟದಲ್ಲಿ ಪಾರ್ವತೀ ಪತಿಯಾದ ರುದ್ರ ದೇವರು ಮಾತ್ರ ಇದ್ದರೂ ಶ್ರೀ ಮಧ್ವರಿಂದ ಪ್ರತಿಷ್ಠಿತನಾದ ಶ್ರೀಕೃಷ್ಣನಲ್ಲಿ ಮಹಾಮಹಿಮನಾದ ಶ್ರೀಕೃಷ್ಣನು ಇಲ್ಲಿರುವುದರಿಂದ, ಈಶಾಚಲಕ್ಕಿಂತಲೂ, ರಜತಪೀಠವು ಶ್ರೇಷ್ಠವಾದುದು.

೫. ಭಕ್ತ ಪರಾಧೀನನಾದ ಶ್ರೀಕೃಷ್ಣ :-- ಸಾಲಿಗ್ರಾಮ ಶಿಲಾಮೂರ್ತಿಯಾದ ಬಾಲಕೃಷ್ಣನ ಬಲಗೈಯಲ್ಲಿ ಕಡೆಗೋಲು ಎಡಗೈಯಲ್ಲಿ ಮೊಸರು ಕಡೆಯುವ ಹಗ್ಗ ಇದೆ. ನನ್ನ ಪಾದಭಜಕರ ಪಾಪಗಳನ್ನು ಮೊಸರು ಕಡೆದಂತೆ ಕಡೆದು ಹೋಗಲಾಡಿಸಿ, ಅವರಿಗೆ ಜ್ಞಾನ, ಭಕ್ತಿ, ವೈರಾಗ್ಯ ಸಂಪತ್ತುಗಳನ್ನು ನೀಡುತ್ತೇನೆ ಎಂಬುದನ್ನು ತಿಳಿಸಲು, ಶ್ರೀಕೃಷ್ಣನು ಕರಗಳಲ್ಲಿ ಕಡೆಗೋಲು ಮತ್ತು ಹಗ್ಗಗಳನ್ನು ಧರಿಸಿದ್ದಾನೆ. ಈ ಶ್ಲೋಕದಲ್ಲಿ ವಾದಿರಾಜರು ಶ್ರೇಷ್ಠವಾದ ಯತಿಗಳ ಭಕ್ತಿ ಪಾಶಕ್ಕೆ ಅಧೀನನಾಗಿರುವ ಶ್ರೀಕೃಷ್ಣನು ನಮ್ಮ ಬಗ್ಗೆ ಸಂತುಷ್ಟನಾಗಲಿ ಎಂದು ಪ್ರಾರ್ಥಿಸುತ್ತಾರೆ.

೬. ಮಹಾಮಹಿಮ ಶ್ರೀಕೃಷ್ಣ :-- ಎಲಾ ಶ್ರೀಕೃಷ್ಣನೇ ನಿನ್ನ ಮಹಿಮೆಯು ಅಪಾರವಾದುದು ಮತ್ಸ್ಯಾವತಾರದಲ್ಲಿ ನೀನು ಪ್ರದರ್ಶಿಸಿದ ಚಾಂಚಲ್ಯ, ಕೂರ್ಮಾವತಾರದಲ್ಲಿ ತೋರಿದ ಕಾಠಿಣ್ಯ ವರಾಹನಾಗಿ ಅದೋವದನನಾಗಿರುವಿಕೆ, ನರಸಿಂಹನಾಗಿ ಪ್ರದರ್ಶಿಸಿದ ಕ್ರೋಧ, ವಾಮನನಾಗಿ ಇಂದ್ರನ ರಕ್ಷಣೆಗಾಗಿ ಬಲಿಯ ಬಳಿ ಯಾಚನೆ, ಪರಶುರಾಮನಾಗಿ, ಮಾತೆಗೆ ಉಪಕಾರ, ರಾಮನಾಗಿ ಏಕಪತ್ನೀವ್ರತದ ಪಾಲನೆ, ಕೃಷ್ಣಾವತಾರದಲ್ಲಿ ಕಳ್ಳತನ, ಬುದ್ಧನಾಗಿ ಅಸುರಮೋಹ, ಕಲ್ಕಿಯಾಗಿ ಅಶ್ವಾರೋಹಣಾದಿ ಚಾತುರ್ಯ ಇವೆಲ್ಲಾ ಅತ್ಯಾಶ್ಚರ್ಯಕರವಾಗಿದೆ. "ಹೇ ಮಹಾಮಹಿಮ ಶ್ರೀಕೃಷ್ಣ ನಮ್ಮನ್ನು ದಯೆದೋರಿ ಕಾಪಾಡು" ಎಂದು ಗುರುರಾಜರು ಪ್ರಾರ್ಥಿಸುತ್ತಾರೆ. ಇಲ್ಲಿ ಶ್ರೀಹರಿಯ ದಶಾವತಾರದ ಲೀಲೆಗಳನ್ನು ಬಹಳ ಸಂಕ್ಷಿಪ್ತವಾಗಿ ಗುರುರಾಜರು ಬಣ್ಣಿಸಿದ್ದಾರೆ.

೭. ಬ್ರಹ್ಮಾದಿಗಳಿಂದ ಅರ್ಚಿತನಾದ ಶ್ರೀಕೃಷ್ಣ :-- "ರೂಪ್ಯಾತ್ಮಕಾಪುರ ಪುರಸ್ಕರ ಸನ್ನಿರೂಪ್ಯ" ಎಂಬ ಶ್ಲೋಕದಲ್ಲಿ ಗುರುರಾಜರು ಬ್ರಹ್ಮಾದಿ ದೇವತೆಗಳಿಂದ ಪೂಜಿತನಾದ ದೇವತೆಗಳಲ್ಲೇ ಶ್ರೇಷ್ಠನಾದ ರಜತಪೀಠದಲ್ಲಿ ಸನ್ನಿಹಿತನಾದ, ಶ್ರೀಕೃಷ್ಣನೇ, ನಿನ್ನ ಕೃಪೆಯಿಂದ ಮೋಕ್ಷ ಯೋಗ್ಯಜೀವರು, ವೈಕುಂಠದಲ್ಲಿ ನೆಲಸಿ ತಮ್ಮ ಸ್ವರೂಪಭೂತವಾದ ಆನಂದವನ್ನು ಹೊಂದಿದ್ದಾರೆ. ಅಂತಹಾ ಜೀವನ್ಮುಕ್ತರಿಗೆಲ್ಲಾ ನೀನೇ ಸ್ವಾಮಿ, "ಮುಕ್ತಾನಾಂ, ಪರಮಾಗತಿಃ" ಎಂದು ಶ್ರುತಿ ಸ್ಮೃತಿಗಳು ನಿನ್ನನ್ನು ಕೊಂಡಾಡುವವು ಎಲಾ ದೇವಶ್ರೇಷ್ಠನಾದ ಶ್ರೀಕೃಷ್ಣನೇ ಈ ಸಂಸಾರದಲ್ಲಿ ಕೂಡಾ ನೀನು ನಮಗೆ ಆಶ್ರಯದಾತನಾಗಿ ಕಾಪಾಡುತ್ತಿರು ಎಂದು ರಾಜರು ಪ್ರಾರ್ಥಿಸುತ್ತಾರೆ.

ಈ ರೀತಿ ತನ್ನ ಕಾರ್ಯಕ್ಷೇತ್ರ ಭೂವೈಕುಂಠವಾದ ರಜತ ಪೀಠಪುರವನ್ನು ಮತ್ತು ತನ್ನ ಆರಾಧ್ಯದೈವ ಭಕ್ತವತ್ಸಲನಾದ ಬಾಲಕೃಷ್ಣನನ್ನು ವಾದಿರಾಜರು ಬಹು ಸುಂದರವಾಗಿ ತರ್ಕಬದ್ಧ ಹಾಗೂ ಶಾಸ್ತ್ರಸಿದ್ಧವಾಗಿ ವರ್ಣಿಸುತ್ತಾರೆ.



# ಹೂವಿನ ಕೆರೆ

---ಎಸ್. ಶ್ರೀನಿವಾಸತಂತ್ರಿ.

ದ್ವೈತಮತ ಸ್ಥಾಪನಾಚಾರ್ಯ ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ಬಾಲಕೃಷ್ಣನ ಮುದ್ದು ಮೂರ್ತಿಯನ್ನು ಪ್ರತಿಷ್ಠಾಪಿಸಿ ಆತನ ನಿತ್ಯ ಪೂಜೆಗಾಗಿ ಎಂಟು ಮಂದಿ ಬಾಲಯತಿಗಳನ್ನು ನಿಯೋಜಿಸಿದಂತೆ ಪವಾಡ ಪುರುಷ ಸೋದೆ ಮಠ ಪರಂಪರೆಯ ಶ್ರೀ ಗುರು ವಾದಿರಾಜರು ಎರಡು ತಿಂಗಳ ಸರದಿಯ ಅಷ್ಟಮಠಗಳ ಶ್ರೀಕೃಷ್ಣಪೂಜಾ ಪರ್ಯಾಯವನ್ನು ಎರಡು ವರ್ಷಗಳಿಗೆ ಪರಿವರ್ತಿಸಿ ಅಧಿಕಾರ ಹಸ್ತಾಂತರಿಸುವ ಸಮಾರಂಭಕ್ಕೆ ಪರ್ಯಾಯೋತ್ಸವ ವಿಶೇಷತೆಯ ಮೆರುಗನ್ನಿತ್ತರು. ಸೋದೆ ಮಠದ ಯತಿವರೇಣ್ಯರಲ್ಲಿ ಅಗ್ರಮಾನ್ಯರಾದ ಹಾಗೂ ವಿಷ್ಣುತೀರ್ಥರ ಪೀಳಿಗೆಯಲ್ಲಿ ಬಂದ ವಾಗೀಶ ತೀರ್ಥರಿಂದ ಸನ್ಯಾಸಾಶ್ರಮ ಸ್ವೀಕರಿಸಿದ ವಾದಿರಾಜ ಗುರುಗಳು ದಕ್ಷಿಣಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕುಂಭಾಶಿಕ್ಷೇತ್ರದ ಬಳಿಯಿರುವ ಹೂವಿನಕೆರೆ ಗ್ರಾಮದಲ್ಲಿ ಕ್ರಿ.ಶ. ೧೪೮೦ ಶಾರ್ವರಿ ಸಂವತ್ಸರ ಮಾಘ ಶುದ್ಧ ದ್ವಾದಶಿ ದಿನ ಉಷಃಕಾಲದಲ್ಲಿ ಅವತರಿಸಿದರು. ತಂದೆ ರಾಮಾಚಾರ್ಯರು ಹಾಗೂ ತಾಯಿ ಸರಸ್ವತಮ್ಮ (ಗೌರಿ) ರಿಗೆ ಅವತಾರಪುರುಷನ ಜನನವಾಯಿತು.

## ಅವತಾರ

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತ ಅಧರ್ಮ; ಅತ್ಯಾಚಾರಗಳಿಂದ ತತ್ತರಿಸುತ್ತಿರಲು ಧಾರ್ಮಿಕ ಮಹಾಪುರುಷನ ಆಗಮನದ ಅವಶ್ಯಕತೆಯಿತ್ತು. ಅಷ್ಟ ಮಠಗಳಲ್ಲೊಂದಾದ ಸೋದೆ ಮಠದ ಶ್ರೀ ವಿಷ್ಣುತೀರ್ಥ ಪರಂಪರೆಯ ಶ್ರೀ ವಾಗೀಶತೀರ್ಥರು ಹೂವಿನಕೆರೆಯ ವಾಸ್ತವ್ಯದಲ್ಲಿರುವಾಗ ಪುತ್ರಾರ್ಥಿ ರಾಮಾಚಾರ್ಯರ ಸೇವೆಯಿಂದ ಸಂತುಷ್ಟರಾಗಿ "ಮನೆಯ ಹೊರಗೆ ಮಗುವಿನ ಜನನವಾದರೆ ಮಠಕ್ಕೆ ಅರ್ಪಿಸಬೇಕೆಂದು" ಅನುಗ್ರಹಿಸುತ್ತಾರೆ. ಭಗವತ್ಸಂಕಲ್ಪದಂತೆ ದ್ವಾದಶಿ ದಿನ ರಾಮಾಚಾರ್ಯರು ಪಾರಣೆಯಲ್ಲಿ ನಿರತರಾಗಿರುವಾಗ ಹಸುವೊಂದು ಹೊಲಕ್ಕೆನುಗ್ಗಲು ಅದನ್ನು ಓಡಿಸಲು ಅನ್ಯರಾರೂ ದೊರೆಯದಿರಲು ಗರ್ಭಿಣಿ ಸರಸ್ವತಮ್ಮನೇ ಮನೆಯಿಂದ ಹೊರಗೆ ಬಂದು ಹಸುವನ್ನು ಓಡಿಸಿ ಮರಳುತ್ತಿರುವಾಗ ಅಲ್ಲೇ ಅವತಾರಪುರುಷನ ಜನನವಾಗುತ್ತದೆ. ಗುರುಗಳ ಆಶೀರ್ವಾದದಂತೆ 'ಭೂವರಾಹಸ್ವಾಮಿ' ಹೆಸರಿನ ಮಗು ಶ್ರೀ ಮಠಕ್ಕೆ ಸೇರಿ ವಿದ್ವಜ್ಜನರ ಸಂಪರ್ಕದಲ್ಲಿ ಬೆಳೆಯುತ್ತಾನೆ. ವಾಗೀಶತೀರ್ಥರು ಪರಂಧಾಮ ಹೊಂದಿದ ಬಳಿಕ 'ಭೂವರಾಹಸ್ವಾಮಿ'ಯು ಮಠದ ಉತ್ತರಾಧಿಕಾರಿಯಾಗಿ ವಾದಿರಾಜಸ್ವಾಮಿಗಳೆನಿಸಿಕೊಂಡರು.

ಆಗ ವಿಜಯನಗರ ಉಚ್ಛ್ರಾಯಸ್ಥಿತಿಯಲ್ಲಿತ್ತು. ರಾಜಾಶ್ರಯದ ಗುರು ಪೀಠದಲ್ಲಿದ್ದ ವ್ಯಾಸರಾಜರು ವಾದಿರಾಜರ ಜೀವನ ದೃಷ್ಟಿಗೆ ಹೊಸ ಆಯಾಮ ನೀಡಿದರು. ಮಹತ್ವದ ಸುಧಾರಣಾಕ್ರಮಗಳ ಅನುಷ್ಠಾನದಿಂದ 'ಯತಿರಾಜ'ರೆಂದು ಬಿರುದಾಂಕಿತರಾದರು. ಜನರಲ್ಲಿ ಮನೆ ಮಾಡಿದ್ದ ಅಜ್ಞಾನ ಅಂಧಶ್ರದ್ಧೆ, ಮೌಢ್ಯ ಅಧರ್ಮಗಳನ್ನು ತೊರೆದು ಅವರನ್ನು ಸನ್ಮಾರ್ಗದತ್ತ ಕೊಂಡೊಯ್ಯಲು ಪ್ರೇರಕ ಶಕ್ತಿಯೆನಿಸಿಕೊಂಡರು. ಅವರು ಮೂರು ಬಾರಿ ಅಖಿಲ ಭಾರತ ಸಂಚರಿಸಿ ಜನರ ಸುಖ ಕಷ್ಟಗಳನ್ನು ಅರಿತು ಧರ್ಮೋಪದೇಶ ನೀಡಿ ಆಧ್ಯಾತ್ಮದ ಬೀಜ ಬಿತ್ತಿದರು. ಜನರಲ್ಲಿ ಸ್ವಧರ್ಮಾಭಿಮಾನ ಮೂಡಿಸಿ



ದರು. ಸಮಾಜದ ಪುನರುತ್ಥಾನಕ್ಕೆ ಕಾರಣ ಪುರುಷರೆನಿಸಿದರು. ಬಡವರು, ದೀನರ ಮೇಲೆ ಅನುಕಂಪದ ಮಾನವೀಯದೃಷ್ಟಿ ಬೀರಿದರು. ಧರ್ಮದಿಂದ ವಂಚಿತರಾದ ಅಜ್ಞಾನಿಗಳಿಗೆ ಜ್ಞಾನ ಸುಧೆ ಉಣಿಸಿದರು. ಶ್ರೀ ಸಾಮಾನ್ಯರಿಗೆ ಸುಲಭದಲ್ಲಿ ಅರ್ಥವಾಗುವಂತೆ ಸರಳ ಭಾಷೆಯಲ್ಲಿ ದೇವರ ನಾಮಗಳನ್ನು ತುಳು-- ಕನ್ನಡಗಳಲ್ಲಿ ರಚಿಸಿ ಭಕ್ತಿಪಂಥದ ಅಭ್ಯುದಯಕ್ಕೆ ಕಾರಣರಾದರು. ಸುವರ್ಣಕಾರರ ಕುಲ ಗುರುಗಳೆನಿಸಿ ಭಕ್ತಿ -- ಜ್ಞಾನಗಳ ಸ್ಫೂರ್ತಿ ತುಂಬಿದರು. ಉಡುಪಿ ತಾಲೂಕಿನ "ಮಟ್ಟು" ಗ್ರಾಮದ ಕೃಷಿಕರಿಗೆ "ಗುಳ್ಳ" ಇಂದಿಗೂ ತನ್ನ ಸ್ವಾದಿಷ್ಟತೆಯನ್ನು ಕಾಯ್ದು ಉಳಿಸಿಕೊಂಡಿದೆ. ಶ್ರೀ ಕನಕದಾಸರಿಗೆ ಉಡುಪಿಯಲ್ಲಿ ಶ್ರೀಕೃಷ್ಣನ ದರ್ಶನಭಾಗ್ಯ ಒದಗಿಸಿದ ಮಹಿಮಾಪುರುಷರೆನಿಸಿಕೊಂಡರು.

## ಭಕ್ತಿ -- ಸಾಹಿತ್ಯ

ಆಚಾರ್ಯ ಮಧ್ವರ ಭಕ್ತಿ ಸಿದ್ಧಾಂತವನ್ನು ಅಕ್ಷರಶಃ ಪಾಲಿಸಿದ ಯತಿವರೇಣ್ಯರಲ್ಲಿ ವಾದಿರಾಜರು ಪ್ರಮುಖರು. ಅವರು ದಾಸಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪ್ರತಿಮ ಹಾಗೂ ಅತ್ಯಪೂರ್ವ. ಅವರ ರಚನೆಯ ತುಳು -- ಕನ್ನಡ -- ಸಂಸ್ಕೃತ ಭಕ್ತಿ ಹಾಡುಗಳು ಜನರ ನಾಲಿಗೆಗಳಲ್ಲಿ ಇಂದಿಗೂ ಕಂಠಪಾಠಗೊಂಡು ಮನೆ ಮಾತಾಗಿದೆ. ಅವರ ರಚನೆಯ ಲಕ್ಷ್ಮೀಶೋಭಾನೆ ಹಾಡು ಹೆಂಗಳೆಯರ ನಿತ್ಯದ ಸೊಲ್ಲಾಗಿ ಗುಣುಗುಣಿಸುತ್ತಿವೆ. ಸಾಮಾನ್ಯರಿಗೂ ಸುಲಭ ಗ್ರಾಹ್ಯವಾಗುವಂತೆ ಹತ್ತಾರು ಧಾರ್ಮಿಕ ಕೃತಿ; ತತ್ವಜ್ಞಾನದ ಹೊತ್ತಗೆಗಳನ್ನು ರಚಿಸಿದ್ದಾರೆ. ವೈಕುಂಠ ವರ್ಣನೆ; ಗುಂಡಕ್ರಿಯೆ; ರುಕ್ಮಿಣೀಶ ವಿಜಯ; ಯುಕ್ತಿಮಲ್ಲಿಕಾ; ತೀರ್ಥಪ್ರಬಂಧ (ಪ್ರವಾಸ ಸಾಹಿತ್ಯ); ನ್ಯಾಯರತ್ನಾವಳಿ (ಶಾಸ್ತ್ರ); ಸರಸ ಭಾರತೀ ವಿಲಾಸ; ನ್ಯಾಯ ಸುಧಾ ಟೀಕೆ; ತತ್ವಪ್ರಕಾಶಿಕಾ ಟೀಕೆ; ಮಹಾಭಾರತ ತಾತ್ಪರ್ಯ ನಿರ್ಣಯ' ಲಕ್ಷಾಲಂಕಾರ; ; ಸ್ವಪ್ನ ಪದ್ಯ; ಕೀರ್ತನೆಗಳು; ದಶಾವತಾರ ಹಾಡು (ತುಳು) ಇತ್ಯಾದಿ ಅವರ ಜನಪ್ರಿಯ ಕೃತಿಗಳು.

ತುಳುವಿನಲ್ಲಿ ಅವರು ರಚಿಸಿದ ಭಗವತ್ಸಂಕೀರ್ತನೆ ಸಾಮಾನ್ಯರಿಗೂ ಉಚ್ಚಾರಣೆಗೆ ಸರಳ ಹಾಗೂ ಅರ್ಥವತ್ತಾದುದು. ಮಧ್ವಾಚಾರ್ಯರಿಂದ ಅನುಸರಣೆಗೆ ಬಂದ ಎರಡು ತಿಂಗಳ ಉಡುಪಿ ಪರ್ಯಾಯ ಸರದಿಯನ್ನು ಎರಡು ವರ್ಷಗಳಿಗೆ ಪರಿವರ್ತಿಸಿ ಉಡುಪಿಯಲ್ಲಿ ಪರ್ಯಾಯದ ಸಾಂಸ್ಕೃತಿಕ ಮಹೋತ್ಸವಕ್ಕೆ ಹೊಸ ಶೋಭೆ ತಂದವರು ವಾದಿರಾಜರು. ಅವರ ರಚನೆಯ ಬಹಳಷ್ಟು ಕೃತಿಗಳು ಉಪಲಬ್ಧವಿಲ್ಲದೆ ಹೋಗಿರುವುದು ಶೋಚನೀಯ. ಅವರು ಶ್ರೀಕೃಷ್ಣಮಠ ಪರಿಸರದಲ್ಲಿ ಮುಖ್ಯಪ್ರಾಣ; ಗರುಡ ಹಾಗೂ ಮಧ್ವಾಚಾರ್ಯರ ವಿಗ್ರಹಗಳನ್ನು ಪ್ರತಿಷ್ಠಾಪಿಸಿದರು.

ಅವರ ಆಧ್ಯಾತ್ಮಶಕ್ತಿಯ ಪ್ರಖರತೆ ಎಲ್ಲೆಡೆ ಪ್ರಾಜ್ವಲ್ಯಮಾನವಾಗಿ ಬೆಳಗಿರಲು ನೂರ ಇಪ್ಪತ್ತು ವರ್ಷ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

ಪೇಷ್ಕಾರ್.

ಗಳ ತುಂಬು ಬದುಕಿನ ವಾದಿರಾಜರು ಕ್ರಿ.ಶ. ೧೬೦೦ ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಶಿರಸಿ ಸಮೀಪದ ಸೋದಾಕ್ಷೇತ್ರದಲ್ಲಿ ಸಶರೀರವಾಗಿ ವೃಂದಾವನ ಪ್ರವೇಶಿಸಿದರು. ಸಶರೀರ ವೃಂದಾವನಸ್ಥರಾದ ಯತಿಗಳಲ್ಲಿ ವಾದಿರಾಜರು ಮೊದಲಿಗರು.

## ಹೂವಿನ ಕೆರೆ

ಉಡುಪಿಯಿಂದ ಕುಂದಾಪುರಕ್ಕೆ ಹೋಗು ರಾಷ್ಟ್ರೀಯ ಹೆದ್ದಾರಿ ೧೭ರಲ್ಲಿ ಕುಂಭಾಶಿಯಿಂ ಒಂದು ಫರ್ಲಾಂಗ್ ಮುಂದೆ ಪೂರ್ವದಿಕ್ಕಿಗೆ ಕ ಲೊಡೆದ ರಸ್ತೆಯಿದೆ. ಹೂವಿನಕೆರೆಗೆ ಸ್ವಾಗ ಕೋರುವ ಭವ್ಯ ಕಾಂಕ್ರೀಟ್ ಕಮಾನು ನಿಮ್ಮನ ಕೈಬೀಸಿ ಕರೆಯುತ್ತಿದೆ. ಅಲ್ಲಿಂದ ೫ ಕಿ.ಮೀ. ಪೂರ್ವ ರಸ್ತೆ ಕ್ರಮಿಸಿದರೆ ಸುಂದರ ಪ್ರಶಾಂತ ಪರಿಸರ ಹೂವಿನಕೆರೆ ಮಠ ತಲುಪುತ್ತೇವೆ.

ಹೂವಿನಕೆರೆ ಮಠದಲ್ಲಿ ವಾದಿರಾಜರ ತಂದೆ ರಾಮಾಚಾರ್ಯರು ಪೂಜಿಸುತ್ತಿದ್ದ ಸತೀ ಸಮೇತ ಚೆನ್ನಕೇಶವ ಮೂರ್ತಿಯಿದೆ. ಮಠದ ವಾಯುವ್ಯ ದಿಕ್ಕಿನಲ್ಲಿ ಗೌರಿಗದ್ದೆಯೆಂದು ಕರೆಯಲ್ಪಡುವ ಸ್ಥಳದ (ವಾದಿರಾಜರ ಜನನ) ಗುಡಿಯಲ್ಲಿ ವಾದಿರಾಜರ ಶಿಲಾ ಮೂರ್ತಿಯಿದೆ. ಇದನ್ನು ೧೯೪೧ ರಲ್ಲಿ ಸೋದೆಮಠ ಪರಂಪರೆಯ ಶ್ರೀ ವಿಶ್ವೇಂದ್ರ ತೀರ್ಥರು ಪ್ರತಿಷ್ಠಾಪಿಸಿದರು. ೧೯೮೨ ರಲ್ಲಿ ಸೋದೆ ಮಠದ ಪರಮ ಶಿಷ್ಯರು ಹೂವಿನಕೆರೆ ಮಠದ ಜೀರ್ಣೋದ್ಧಾರ ಕೈಗೊಂಡರು. ಸುಮಾರು ಐದು ಲಕ್ಷಕ್ಕೂ ಹೆಚ್ಚಿನ ವೆಚ್ಚದಿಂದ ಹೂವಿನಕೆರೆ ಮೂಲ ಮಠ; ವಾದಿರಾಜರ ಗುಡಿಯ ಪುನರ್ನಿರ್ಮಾಣ ವಾಯ್ತು. ಸಮೀಪದಲ್ಲೇ ವಿಶಾಲಕೆರೆ (ತಾವರೆಕೆರೆ) ಯಿದ್ದು ಅದರಿಂದಾಗಿಯೇ ಅಲ್ಲಿಗೆ ಹೂವಿನಕೆರೆ ಹೆಸರು ಅನ್ವರ್ಥವಾಗಿರಬೇಕು. ಅಧ್ಯಯನಾರ್ಹ ಜಿಜ್ಞಾಸುಗಳಿಗೆ ವಾದಿರಾಜರ ಕುರಿತಾದ ಮಾಹಿತಿ ಸಂಗ್ರಹಿಸಲು ಪ್ರಶಸ್ತ ಪರಿಸರ ಹಾಗೂ ವಾಸ್ತವ್ಯ ವ್ಯವಸ್ಥೆಯಿದೆ. ಯಾತ್ರಾರ್ಥಿಗಳಿಗೂ ಆದರದ ಆತಿಥ್ಯ ವಿದೆ. ನಿಸರ್ಗ ರಮ್ಯ ವಾದಿರಾಜರ ಜನ್ಮಭೂಮಿಯಲ್ಲಿ ಅವರ ಸಮಗ್ರ ಜೀವನಾಧ್ಯಯನ; ಕಾವ್ಯ ಧಾರೆ; ಭಕ್ತಿ ಸಿದ್ಧಾಂತ ಮುಂದಿನ ಪೀಳಿಗೆಗೆ ಲಭ್ಯವಾಗುವಂತೆ ವಾದಿರಾಜ ಪ್ರತಿಷ್ಠಾನ ರೂಪುಗೊಳ್ಳುವುದು ಅವಶ್ಯವಿದೆ. ಹೂವಿನಕೆರೆಯಲ್ಲಿ ಸದಾ ಭಕ್ತಿ ಜಲ ಪ್ರವಹಿಸುತ್ತಿರಬೇಕು. ಅಲ್ಲಿ ಅಂತಹ ಸುಂದರ ವಾತಾವರಣ ನಿರ್ಮಾಣಗೊಳ್ಳಬೇಕು. ದೇಶದ ನಾನಾ ಭಾಗಗಳಿಂದ ಯಾತ್ರಾರ್ಥಿಗಳು ವಾದಿರಾಜರ ಜನ್ಮಭೂಮಿಯನ್ನು ಸಂದರ್ಶಿಸಿ ಧನ್ಯತೆಯಿಂದ ಮರಳುತ್ತಾರೆ.



# ಕುಲಶೇಖರ ಆಳ್ವಾರರ ಶ್ರೀರಾಮ ಲಾಲಿ

---ದೊರೆಸ್ವಾಮಿ ಅಯ್ಯಂಗಾರ್.

ದಕ್ಷಿಣದ ಚೇರ ಚೋಳ ಪಾಂಡ್ಯ ರಾಜ್ಯಗಳಿಗೆ ಅಧಿಪತಿಯಾಗಿದ್ದ ಕುಲಶೇಖರ ಆಳ್ವಾರರಿಗೆ ಶ್ರೀಮದ್ರಾಮಾಯಣವೆಂದರೆ ಪಂಚಪ್ರಾಣ -- ಅಪರಿಮಿತ ಭಕ್ತಿ. ಅವರ ಬಾಳಿನ ಅನುಭವವೆಲ್ಲ ಶ್ರೀರಾಮಮಯ. "ಸರ್ವಂ ರಾಮಮಯಂ ಜಗತ್" ಎಂಬುದೇ ಆಳ್ವಾರರ ಮೂಲಮಂತ್ರ. ಅವರು ಸದಾ ರಾಮಾಯಣ ರಸಾರ್ಣವದಲ್ಲಿ ಮಗ್ನರಾಗಿ ಮೈಮರೆಯುತ್ತಿದ್ದರು. ಸಂಸ್ಕೃತ ಹಾಗೂ ತಮಿಳು ಭಾಷೆಗಳಲ್ಲಿ ಹೆಸರಾಂತ ಕವಿಯಾಗಿದ್ದುದರಿಂದ ಇವೆರಡು ಭಾಷೆಗಳಲ್ಲಿಯೂ ಭಕ್ತಿಗೀತೆಗಳನ್ನು ರಚಿಸಿದ್ದಾರೆ. ಅವರ ಶ್ರೀಕೃಷ್ಣಭಕ್ತಿಗೆ ಪ್ರಖ್ಯಾತವಾಗಿರುವುದೆಂದರೆ ಸಂಸ್ಕೃತದ "ಮುಕುಂದಮಾಲೆ", ಅವರ ತಮಿಳಿನ **"ಪೆರುಮಾಳ್ ತಿರುಮೊಳಿ"** ಹತ್ತು ದಶಕದ ಭಕ್ತಿಯಾಗರ. ಈ ಪ್ರಬಂಧದ ಕಡೆಯ ಮೂರು ದಶಕಗಳೇ ಶ್ರೀರಾಮ ರಸಾಮೃತ. ಆದಿಕವಿ ಭಗವಾನ್ ವಾಲ್ಮೀಕಿ ತಮ್ಮ ರಾಮಾಯಣದಲ್ಲಿ ಶ್ರೀರಾಮಚಂದ್ರನಿಗೆ ಜೋಗುಳ (ಲಾಲಿ) ಹಾಡಲಿಲ್ಲವಲ್ಲ ಎಂದು ಕುಲಶೇಖರರಿಗೆ ಮನ ನೊಂದಿರಬೇಕು. ಆ ನೋವೇ ಕಾವಾಗಿ, ಕಾವ್ಯವಾಗಿ ತಮಿಳಿನ ಪಾಶುರಗಳ (ಪದ್ಯಗಳ) ರೂಪದಲ್ಲಿ ಮೈವೆತ್ತಿದೆ. ಆಳ್ವಾರರು ತಾನೇ ಕೌಸಲ್ಯಾದೇವಿಯೆಂದು ಭಾವಿಸಿಕೊಂಡು ಶ್ರೀರಾಮನಿಗೆ ಜೋಗುಳ ಹಾಡಿದ್ದಾರೆ. ಇದರ ಕನ್ನಡ ಅನುವಾದವಿದು.



ಕೌಸಲೆಯ ವರಗರ್ಭ ಸಂಭವನೆ,
ದಶಶಿರನ ತಲೆಗಳನು ಕಡಿದವನೆ,
ಬಳಸಿರ್ಪ ಚೆಂಪೊನ್ನ ಮಾಡಗಳ
ವರ ಕಣ್ಣಪುರವೆನ್ನ ಕರ್ಮಣಿಯೆ,
ಎನ್ನಿನಿಯ ಅಮೃತಸಮ ರಾಘವನೆ, ೧

ಕಮಲದೊಳು ಜಗವೇಳ ಕಂಡವನೆ,
ಕಲ್ಲೆದೆಯ ತಾಟಕಿಯ ಎಚ್ಚವನೆ,
ಭಕ್ತರಾ ಮನಸೆಳೆವ ವರಕೃಷ್ಣ
ಪುರದೆನ್ನ ಕರ್ಮಣಿಯೆ, ಎಣ್ದೆಸೆಯ
ಮನುಜಕುಲಕಧಿಪತಿಯೆ, ರಾಘವನೆ, ೨

ನರುಮಲರ ಸುಳಿಗುರುಳ ಕೌಸಲೆಯ,
ಕುಲಪುತ್ರ ಸತ್ಕೀರ್ತಿಯಾಗರನೆ,
ಜನಕಜಾಮಾತ, ವರಗಂಗೆಯಿಂ
ಪರಿಪೂತ ತೀರ್ಥಗಳ ಶ್ರೀಕೃಷ್ಣ
ಪುರದೆಮ್ಮ ಕರ್ಮಣಿಯೆ, ರಾಘವಾ, ೩

ನಾಭಿ ಕಮಲ ದೊಳಜನ ಪಡೆದವನೆ,
ದಶರಥನ ಹೆಮ್ಮಗನೆ, ಜನಕಜಾ
ವಲ್ಲಭನೆ, ಬಂಡುಣಿಗಳಿಂ ಚರದ
ರಸ ಸವಿವ ಚಾಪಧರ ಶ್ರೀಕೃಷ್ಣ
ಪುರದೆಮ್ಮ ಕರ್ಮಣಿಯೆ, ರಾಘವಾ, ೪

ಪರತಂತ್ರ ಗುಣ ಸಾಂದ್ರ ಭರತಂಗೆ
ಭೂವಳಯ ದೈಸಿರಿಯ ನೀನಿತ್ತೆ;
ಕೈಂಕರ್ಯ ಲಕ್ಷ್ಮಿಯನೆ ಬಯಸಿದಾ
ಲಕ್ಷ್ಮಣನೊಡನೆ ದಂಡಕವ ಪೊಕ್ಕ
ಪೇರುರದ ಪಟ್ಟಾಧಿಪತಿ ರಾಮ, ೫

ದೆಂಬಿಡಿದ ಬಾಂಧವರ ಬಿಟ್ಟಗಲಿ
ಕಿರಿಯರಸಿ ನುಡಿದಂತೆ ಘನಘೋರ
ಕಾನನವ ಪೊಕ್ಕಹಂಕೃತಿಯಳಿದ
ಜ್ಞಾನಿಗಳ ಮರ್ದನಿಪ ಕರ್ಮಣಿಯೆ,
ಕೃಷ್ಣಪುರದೆಮ್ಮೊಡೆಯ ರಾಘವನೆ, ೬

ಆಲದೆಲೆ ಮೇಲೊರ್ವ ಶಿಶುವಾಗಿ
ಜಗವುಂಡು, ವಾಲಿಯನು ಕೊಂದಿಕ್ಕಿ
ಅನುಜಂಗೆ ಕಪಿರಾಜ್ಯವಿತ್ತವನೆ,
ರತ್ನಗಳ ಸೂಸುವಾ ನಾಲೆಗಳ
ಕೃಷ್ಣಪುರದೆನ್ನ ಕರ್ಮಣಿಯೆ ರಾಮ, ೭

ಗಿರಿಗಳಿಂದಣೆ ಕಟ್ಟಿ ಲಂಕೆಯನು
ಪಾಳ್ಗೆಯ್ದು ಪಾಲ್ಗಡಲ ಕಡೆದಮರ
ಗಣ ಕಮೃತ ವಿತ್ತವನೆ, ಜ್ಞಾನಿಗಳ
ಬೀಡೆನಿಪ ಕೃಷ್ಣಪುರ ವರದೆಮ್ಮ
ಕರ್ಮಣಿಯೆ ಶಾರ್ಙ್ಗಧರ ರಾಘವನೆ, ೮

ಪರಿಮಳದ ಸೋರ್ಮುಡಿಯ ದಾಶರಥಿ,
ಬ್ರಹಾಸ್ತ್ರವಪ್ಪಳಿಸೆ, ಸೌಧಗಳ
ಲಂಕೆಯನು ಧೂಳ್ಗೆಯ್ದು, ಕಳೆಯಳಿಯೆ
ಚೆಂಗಮಲ ವರಳಿರ್ದ ಕೃಷ್ಣಪುರ--
ವರದೊಳನುಜಂಗೊಲಿದ ಕರ್ಮಣಿಯೆ, ೯

ಸುರಾಸುರರಮೇಣೆಂಟು ದೆಸೆಯೆಸಗಿ,
ಭಕ್ತರೆರಗಲ್ಕೆ ರಂಗಪುರದೊಳು
ಪವಡಿಸಿದೆ, ಪುಣ್ಯನದಿ ಕಾವೇರಿ
ತೀರದೊಳೆಸೆವ ಕೃಷ್ಣಪುರವಾಸಿ
ಕೂರ್ಗಣೆಯ ಕರ್ಮಣಿಯೆ ರಾಘವಾ, ೧೦

ಕೌಸಲ್ಯೆ ಪಾಡಲ್ಕೆ ಜೋಗುಳವ,
ಕೂರೀಂಟಿ ದೆಳ್ಗೊಡೆಯ ಭೂಮಿಪತಿ
ಕುಲಶೇಖರ ನೊರೆದ ಕಣ್ಣಪುರ
ಕರ್ಮಣಿಯ ಗೀತೆಯನು ಪಾಡುವೊಡೆ
ಭಕ್ತಕುಲ ಬಾಳುವುದು ಸುಖದಿಂದೆ, ೧೧



# ಕಾಮದಹನ

---ಅನಂತ ಚಿಂತಾಮಣಿ ಜ್ಯೋತಿಷೀ.

ಫಾಲ್ಗುಣ ಶುದ್ಧ ಪೂರ್ಣಿಮೆಯು ಹೋಳಿ ಹುಣ್ಣಿಮೆ ಎಂದು ಹೆಸರಾಗಿದೆ. ತಾರಕಾಸುರನ ವಧೆಯು ಶಿವ ಪಾರ್ವತಿಯರಿಂದ ಹುಟ್ಟಿದ ಕಾರ್ತಿಕೇಯನಿಂದಲೇ ಆಗಬೇಕಿತ್ತು. ಶಿವ ಪಾರ್ವತಿಯರನ್ನು ಒಂದುಗೂಡಿಸುವಲ್ಲಿ ಮದನನು ಯಶಸ್ವಿಯಾದರೂ ಶಿವನು ತನ್ನ ತಪೋಭಂಗ ಮಾಡಿದ ಕಾರಣದಿಂದ ತನ್ನ ಮೂರನೆಯ ಕಣ್ಣಿನಿಂದ ಕಾಮನನ್ನು ದಹಿಸಿದ ದಿನವೇ ಫಾಲ್ಗುಣಪೂರ್ಣಿಮೆ. ಅಂದು ಉತ್ತರಾ ನಕ್ಷತ್ರವಿರುತ್ತದೆ. ಉತ್ತರಾ ತಾರೆಗೆ ಫಾಲ್ಗುಣಿ ಹೆಸರು ಇರುವುದರಿಂದ ಮಾಸ ಫಾಲ್ಗುಣವಾಯಿತು. ಕಾಮನು ಶಿವನ ಮೂರನೆಯ ಕಣ್ಣಿಗೆ ಬಲಿಯಾದನಂತರ ರತಿಯು ಬಹು ಪರಿಪರಿಯಾಗಿ ರೋಧಿಸತೊಡಗಿದಳು. ಅನಂಗನಾಗಿ ಸರ್ವರ ಮನಸ್ಸಿನಲ್ಲಿ ಇರುವನೆಂದು ಹೇಳಿ ರತಿಗೆ ಶಿವನು ಸಮಾಧಾನಪಡಿಸಿದನು. ಫಾಲ್ಗುಣ ಶುದ್ಧ ಪೂರ್ಣಿಮೆ ದಿನದಿಂದಲೇ ಮದನನು ಅನಂಗನಾದನು. ಶಿವನು ಯಾವ ರೀತಿಯಾಗಿ ಕಾಮನನ್ನು ದಹಿಸಿದಂತೆ ನಾವಿಂದು ಮನಸಿಜನಾದ ಕಾಮನನ್ನು ಸುಟ್ಟುಹಾಕಬೇಕು.

ಕಾಮದಹನ ಹಬ್ಬವು ಉಲ್ಲಾಸ, ಉತ್ಸಾಹ, ಸಂತಸ, ಸಂಭ್ರಮದ ಪ್ರತೀಕವಾಗಿದೆ. ಆಕಾಶ ಭೈರವಕಲ್ಪ ಎಂಬ ಪ್ರಾಚೀನ ಗ್ರಂಥದೊಳಗೆ ಕಾಮನ ದಹನ ಹಬ್ಬದ ಆಚರಣೆ ವಿಧಾನಗಳನ್ನು ಹೇಳಿದೆ. ಇದರ ಮೇಲಿಂದ ಪೌರಾಣಿಕ ಕಾಲದಲ್ಲಿಯೂ ಈ ಹಬ್ಬವು ಆಚರಣೆಗೊಳ್ಳುತ್ತಿತ್ತು ಎಂದು ಸಿದ್ಧವಾಗುತ್ತದೆ. ವಿಜಯನಗರ ದೊರೆಗಳ ಕಾಲದಲ್ಲಿ ಈ ಹಬ್ಬವು ಬಹು ವೈಭವದಿಂದ ನಡೆಯುತ್ತಿತ್ತು. ಈ ಹಬ್ಬದ ಬಣ್ಣದ ಓಕುಳಿಯಾಟದಲ್ಲಿ ಶ್ರೀಕೃಷ್ಣದೇವರಾಯನು ಸ್ವತಃ ಪಾಲ್ಗೊಳ್ಳುತ್ತಿದ್ದನೆಂದು ಇತಿಹಾಸ ದಾಖಲೆಯೂ ಸಾರುತ್ತದೆ. ಅಲ್ಲದೇ ಕೃಷ್ಣದೇವರಾಯ ದೊರೆಯ ಕಾಲದಲ್ಲಿ ಬಂದಿದ್ದ ಪೋರ್ತುಗೀಜ ರಾಯಭಾರಿ ಡಾಮಿಂಗೊಪಯಸ್ -- ಇವನು ಕಾಮದಹನದ ಆಚರಣೆ ಓಕುಳಿಯಾಟದ ಕುರಿತು ವಿವರವಾಗಿ ಬರೆದಿರುವನು. ಕಾಮನ ಹಬ್ಬವು ಕನಕದಾಸನಿಗೆ ಮೋಹನತರಂಗಿಣಿ ಹಾಡಿಗೆ ಹಿನ್ನೆಲೆಯನ್ನು ಒದಗಿಸಿತು ಎಂದು ಪ್ರಾಜ್ಞರು ಅಭಿಪ್ರಾಯಪಡುತ್ತಾರೆ.

ಚಳಿರಾಯನನ್ನು ಬಿಡಿಸಿ ಬಾಳಿಗೆ ಹುರುಪು ಕೊಡುವ ವಸಂತನನ್ನು ಆಹ್ವಾನಿಸುವ ಈ ಕಾಮದಹನ ಹಬ್ಬದ ಮಾದರಿಯಂತೆ ಭಾರತವಲ್ಲದೇ ಇಟಲಿ ಇಂಗ್ಲಂಡ ಇಜಿಪ್ತಗಳಲ್ಲಿ ಆಚರಣೆಗೊಳ್ಳುತ್ತದೆ. ಇಜಿಪ್ತಿನ ಧಾನ್ಯದ ಅಧಿದೇವತೆ ಒರಿಸಸ್ ಮೃತಪಟ್ಟು ಪುನಃ ಬದುಕುವ ಕಥೆಯು ಕಾಮನನ್ನು ಹೋಲುತ್ತದೆ. ಉತ್ತರ ಇಟಲಿಯ ಟಿರೋಲದ ಜನರು ಅನೇಕ ಬಣ್ಣ ಬಣ್ಣಗಳ ಉಡುಪುತೊಟ್ಟುಕೊಂಡು ಹೂಚಿಗುರುಗಳ ಸಣ್ಣ ಸಣ್ಣ, ಸಸಿಗಳನ್ನು ಕಿರೀಟದಂತೆ ಮಾಡಿ ಧರಿಸಿ ಕೈಯಲ್ಲಿ ಖಡ್ಗವನ್ನು ಕೊಂಡು ತರತರಹ ಮುಖವಾಡ ಹಾಕಿಕೊಂಡು ಚಳಿರಾಯನನ್ನು ಓಡಿಸುತ್ತ ವಸಂತನನ್ನು ಬಹು ಆನಂದದಿಂದ ಬರಮಾಡಿಕೊಳ್ಳುವ ನೃತ್ಯವನ್ನು ಮಾಡುತ್ತಾರೆ. ಇಂಗ್ಲಂಡದಲ್ಲಿ ಕಾಮದಹನವನ್ನು ಕಾರ್ನಿವಲ್ ದಹನವೆಂದು ಕರೆಯುತ್ತಿದ್ದರು. ಮನುಷ್ಯನಂತೆ ಚಳಿರಾಯನನ್ನು ಮಾಡಿ ಅದನ್ನು ದಹಿಸುತ್ತಿದ್ದರು. ಮೋರೇರಿಯಾದ ಕೆಲವು ಹಳ್ಳಿಗಳಲ್ಲಿ ಹುಲ್ಲಿನಿಂದ ಗೊಂಬೆ ಮಾಡಿ ಅದನ್ನು ಮೆರವಣಿಗೆ ಮಾಡಿ ನಿಶ್ಚಿತಸ್ಥಳಕ್ಕೆ ಒಯ್ದು ದಹಿಸುತ್ತಿದ್ದರು.

ಕಾಮದಹನದ ಕಥೆಯು ಭವಿಷ್ಯೋತ್ತರ ಪುರಾಣದಲ್ಲಿದೆ. ಶ್ರೀಕೃಷ್ಣ -- ಅರ್ಜುನರ ಸಂವಾದಾತ್ಮಕವಾಗಿದ್ದು ಧೂಂಡಾ ರಾಕ್ಷಸಿಯ ಕುರಿತು, ವರಪ್ರದಾನ, ವರದ ದುರ್ಲಾಭ, ನಂತರ ಅಂತ್ಯ ಮೊದಲಾದ ವಿವರವಿದೆ. ಮರುದಿನ ವಸಂತೋತ್ಸವವಿರುತ್ತದೆ. ಧೂಂಡಾ ರಾಕ್ಷಸಿ ದಹನವಾದ ನಂತರ ಹೋಲಿಕಾ ಭಸ್ಮಧಾರಣ ವಿಧಿಯಿದೆ. ವಸಂತೋತ್ಸವವು ಆನಂದದ ದ್ಯೋತಕವಾಗಿದೆ.

ಅಂದು ಕೆಲವರು ರತಿ ಮದನರ ಪೂಜೆಯನ್ನು ಮಾಡುತ್ತಾರೆ. ಕೆಲವರು ರಂಗ ಪಂಚಮಿಯಂದು ರತಿ ಮದನ ಪೂಜೆ ಓಕುಳಿಯಾಟ ಆಡಿ ಆನಂದಪಡುವರು.

ಹೋಲಿಕಾ ಭಸ್ಮಧಾರಣವು ಧಾರ್ಮಿಕ ಪರಂಪರೆಯ ಹಿನ್ನೆಲೆಯೆನಿಸಿದೆ. ಪುರಾತನ ಕಾಲದಲ್ಲಿ ಯಜ್ಞ ಯಾಗಾದಿಗಳಲ್ಲಿ ಅವಭೃತೋತ್ಸವವು ನಡೆಯುತ್ತಿತ್ತು. ಅವಭೃತೋತ್ಸವದಲ್ಲಿ ಯಾಗಭಸ್ಮವನ್ನು ಕೆಲವರು ಲೇಪಿಸಿಕೊಂಡರೆ ಕೆಲವರು ಅದನ್ನು ನೀರಿನಲ್ಲಿ ಬೆರೆಸಿ ಪರಸ್ಪರ ಸಿಂಪಡಿಸಿ ನಲಿಯುತ್ತಿದ್ದರು. ಅನಂತರ ಶುದ್ಧೋದಕ ಸ್ನಾನವನ್ನು ಮಾಡುತ್ತಿದ್ದರೆಂದು ಹೇಳಲಾಗುತ್ತಿದೆ. ಈ ಫಾಲ್ಗುಣ ಉತ್ಸವದ ಫಲಶ್ರುತಿಯು ಇಂತಿದೆ -- ಯಾರು ಶಾಸ್ತ್ರೋಕ್ತವಾಗಿ ಫಾಲ್ಗುಣ ಉತ್ಸವವನ್ನು ಮಾಡುತ್ತಾನೋ ಅವನ ಎಲ್ಲ ಮನೋರಥಗಳು ಅನಾಯಾಸವಾಗಿ ಸಿದ್ಧಿಸುತ್ತವಲ್ಲದೇ ಆಧಿ, ವ್ಯಾಧಿ (ಚಿಂತೆ - ರೋಗ)ಗಳಿಂದ ನಾಶವನ್ನು ಪಡೆಯುತ್ತದೆ. ಆತನು ಪುತ್ರ ಪೌತ್ರರಿಂದ ಸಂತಸಪಡೆಯುತ್ತಾನೆ.

ಅದೇನೇ ಇದ್ದರೂ ಕಾಮದಹನವು ದುಷ್ಟತೆಗಳ ದಹನವನ್ನು ಮಾಡಬೇಕೆಂದು ಸೂಚಿಸುತ್ತದೆ. ಹಾಲಿನಂತೆ ಹರಡಿದ ಆಹ್ಲಾದಕರವಾದ ಹುಣ್ಣಿಮೆಯ ದಿನದ ತಿಂಗಳ ಬೆಳಕಿನಲ್ಲಿ ಒಳ್ಳೆಯ ಸಂಗತಿಗಳ ಕುರಿತು ಚಿಂತಿಸುವ ಯೋಗ್ಯಕಾಲವಾಗಿದೆ.

✡ ✡ ✡

# ಮಾವಿನ ಮರದ ನೆರಳಲ್ಲಿ...

---ದಿ|| ಬಿ.ನ. ಗುಂಡೂರಾವ್.

ಜನ್ಮಜನ್ಮಾಂತರೇಪಿ
ತ್ವತ್ ಪಾದಾಂ ಭೋರುಹಯುಗಗತಾ
ನಿಶ್ಚಲಾಭಕ್ತಿರಸ್ತು
ಅಜ್ಞಾನಿನಾ ಮಯಾದೋಷಾನ್
ಅಶೇಷಾನ್ ವಿಹಿತಾನ್ ಹರೇ
ಕ್ಷಮಸ್ವ ತ್ವಂ ಕ್ಷಮಸ್ವ ತ್ವಂ
ಶೇಷಶೈಲ ಶಿಖಾಮಣೇ

ಎನ್ನುತ್ತ ದೀರ್ಘದಂಡ ಪ್ರಣಾಮ ಮಾಡಿ, ಒಬ್ಬಾತ ಗರ್ಭಗುಡಿಯಿಂದ ಹೊರಕ್ಕೆ ಬಂದು ಆಲಯ ಸಮೀಪದಲ್ಲಿರುವ ಮಾವಿನಮರದ ನೆರಳಿನಲ್ಲಿ ಕೂತಿದ್ದಾನೆ -- ಆನಂದ ಬಾಷ್ಪಗಳನ್ನುತ್ತರೀಯದಿಂದ ಒರೆಸಿಕೊಳ್ಳುತ್ತ--

ಯಾರೀ ತಿರುವೇಂಕಟಾಧೀಶ? ಯಾವುದೀ ಕೃಪಾಮೂರ್ತಿ ? ಯಾರೀ ಲಾವಣ್ಯ ಜಲಧಿ ?

ಜಲಧಿಕನಾಪಾಂಗ [illegible] ಹೊಳೆಯುವ ಕಜ್ಜಲ ಬಿಂದುವೀತನಿರಬಹುದೇ? ಅಥವ--

ಜಲಜಾಸನಾದಿ ಬೃನ್ದಾರಕಸನ್ದೋಹವನ್ದಿತ ಚರಣಾರವಿಂದನೇ ? ಅಥವ -- ತಾಪಸೋತ್ತಮರ ಚಿನ್ತನಾಸೌಧಾನ್ತರ್ಗತ ಸುಜ್ಞಾನ ಜ್ಯೋತಿಯೆ ? ಯಾರೀತ ? -- ಎಂದು ತನ್ನ ಆರಾಧ್ಯದೇವನಾದ, ಪದ್ಮಾರಾಧಿತಪಾದಪದ್ಮನಾದ ಶ್ರೀನಿವಾಸನ ವೈಭವವನ್ನು ಮನಸಾರೆ ಧ್ಯಾನಿಸುತ್ತ ಕಣ್ಮುಚ್ಚಿ ಕುಳಿತಿರುವ ಈ ಪರಮ ಭಾಗವತೋತ್ತಮ -- ಅನ್ನಮಾಚಾರ್ಯ. ಸಂಗೀತ ಪ್ರಪಂಚದಲ್ಲಿ ಅಗ್ರಮಾನ್ಯನಾದ, ಸಂಕೀರ್ತನ ಸಂಪ್ರದಾಯ ಪಿತಾಮಹನಾದ ಮಹಾನ್ ವಾಗ್ಗೇಯಕಾರ. ಶ್ರೀನಿವಾಸನ ಲೀಲಾ ವಿನೋದಗಳನ್ನು ಬಣ್ಣಿಸುತ್ತ ೩೨ ಸಹಸ್ರ ಕೀರ್ತನೆಗಳನ್ನು ರಚಿಸಿದ ಸಂತ ಕವಿ, ಪರಮ ಭಕ್ತ. ಪರಮ ಭಾವುಕನಾದ ಅನ್ನಮಾಚಾರ್ಯ ಪದಕವಿತಾಪಿತಾಮಹನೆಂದು ಕೀರ್ತಿ ಪಡೆದು, ತನ್ನ ಅನುಪಮ ಕೃತಿಗಳಲ್ಲಿ ಯಶಶ್ಶರೀರಿಯಾಗಿ, ಎಂದೆಂದಿಗೂ ಜೀವಂತವಾಗಿದ್ದಾನೆ. ತನ್ನ ಹದಿನಾರನೇ ವಯಸ್ಸಿನಲ್ಲಿ ಭಗವದ್ದರ್ಶನ ಪಡೆದ ಈ ಸಿದ್ಧಪುರುಷ ಶ್ರೀನಿವಾಸನ ಕೃಪಾಪಾತ್ರನಾದ ಪುನೀತಜೀವಿ.

ದೇಹದ ದಾಹವಣಗಿದಮೇಲೆ ತತ್ವಚಿನ್ತನ ಮಾಡಬಯಸುವ ಜಗತ್ತಿನ ಮೌಢ್ಯವನ್ನು ಕಂಡು ಆತ ಆಶ್ಚರ್ಯಪಡುತ್ತಿದ್ದಾನೆ. ದಾಹವಣಗುವುದೆಂದು? ತತ್ವ ದೊರೆಯುವುದೆಲ್ಲಿ? . ಶ್ರೀಹರಿಯ ಸಾಕ್ಷಾತ್ಕಾರ ಭಾಗ್ಯ ದೊರೆಯುವುದಾದರೂ ಹೇಗೆ? ಈಶ್ವರೋನ್ಮುಖವಾದ ಅನುರಾಗವನ್ನು ಭಕ್ತಿಯೆನ್ನುವುದಾದರೆ -- ಮಮಾತ್ಮಾ ಸರ್ವಭೂತಾತ್ಮಾ ಎಂಬ ಭಾವನೆಯನ್ನೇನೆನ್ನಬೇಕು ? ಸರ್ವಂ ಬ್ರಹ್ಮಮಯಂ -- ಎಂಬುದನ್ನು ಕಣ್ಣಾರೆ ಕಂಡು, **ಮನಸಾರೆ ಅನುಭವಿಸಿದಾಗ -- ಅದನ್ನು ತನ್ಮಯತ್ವೆ** **ಸಾಕ್ಷಾತ್ಕಾರವೆನ್ನಬಹುದೇ** ? ಪರಮ**ಯೋಗೀಂದ್ರ**ರಿಗೆ ಭಾವ ಗೋಚರನಾದ ಶ್ರೀನಿವಾಸನ **ಶ್ರೀ**ಚರಣಗಳೇ ನನಗೆ ಶರಣ್ಯವಾಗಿರುವಾಗ ಚರ್ಚೆಯೇಕೆ? ಅನುಮಾನವೇಕೆ?



ಅನ್ನಮಾಚಾರ್ಯ ತನ್ನಲ್ಲಿ ತಾನೇ ಮಾತಾಡಿಕೊಳ್ಳುತ್ತ ಗಂಭೀರವಾಗಿ ಕುಳಿತಿದ್ದಾನೆ -- ಧ್ಯಾನಲೀನನಾಗಿದ್ದಾನೆ. ಕಿಂ ವಚನೀಯಂ? ಕಿಂ ಅವಚನೀಯಂ? --ಎಂಬಂತಿದೆ ಆತನ ಸ್ಥಿತಿ. ಅಷ್ಟರಲ್ಲಿ ಒಬ್ಬಾತ ಅಲ್ಲಿಗೆ ಬಂದ. ಬಹುಶಃ ಅನ್ನಮಾಚಾರ್ಯನನ್ನೇ ಹುಡುಕಿಕೊಂಡು ಬಂದಂತಿದೆ. ಹುಡುಕಿದಬೇರು ಎಡವಿದಂತೆ -- ಆಚಾರ್ಯರನ್ನು ಕಂಡು ಪರಮ ಭಕ್ತಿಯಿಂದ ನಮಸ್ಕರಿಸಿದ.

ತಮ್ಮ ಧ್ಯಾನಕ್ಕೆ ಭಂಗವಾಗಿದ್ದಲ್ಲಿ ನನ್ನನ್ನು ಕ್ಷಮಿಸೋಣವಾಗಬೇಕು -- ಆಗಂತುಕನ ಮಾತಿನಲ್ಲಿ ವಿನಯ ತುಂಬಿತ್ತು. ವಯಸ್ಸಿನಲ್ಲಿ ಚಿಕ್ಕವನಾದ ಆತ ನನ್ನು ಅನ್ನಮಾಚಾರ್ಯ ಆಪಾದ ಮೌಳಿಪರ್ಯಂತ ದಿಟ್ಟಿಸಿ ನೋಡಿದ.

ನೀವು ಯಾರೆಂದು ಕೇಳಬಹುದೆ ?

ತಮ್ಮ ದರ್ಶನಕ್ಕಾಗಿ ಬಹುಕಾಲದಿಂದ ಕಾದಿದ್ದವನು.

ಅಂದರೆ.........

ತಮ್ಮ ಮಾಧುರ್ಯಪೂರ್ಣವಾದ ಪದರಚನಾ ವ್ಯಖಿಂಯುಳ್ಳ ಅಂತರ್ಗತವಾದ, ಸುಮಧುರ, ಸುರುಚಿಪೂರ್ಣ -- ಭಕ್ತಿರಸಧಾರೆಯನ್ನು ಕಂಡು -- ಸವಿದು -- ಆನಂದಿಸಿದವನು.

ಸ್ವಪ್ನವಾಗಲಿಲ್ಲ?

ವೈರಾಗ್ಯವರ್ಧಕವಾದ ಗಂಭೀರ ಕೃತಿಗಳನ್ನು ರಚಿಸಿದ ತಮಗೆ ಭಕ್ತಿ ಪ್ರಣಾಮಗಳನ್ನರ್ಪಿಸಲು ಹಾತೊರೆದವನು.

ನೇರವಾಗಿ ಮಾತಾಡಬಾರದೇ ?

**ಶ್ರೀ** ಶ್ರೀನಿವಾಸನ ಸಂಪೂರ್ಣ ಕೃಪೆಗೂ, ದಯೈಕಸಿಂಧುವಾದ ಶೇಷಾದ್ರಿ ಶೇಖರನ ಅನುಗ್ರಹಕ್ಕೂ ಪಾತ್ರರಾದ ತಮ್ಮ ದರ್ಶನ ಭಾಗ್ಯವಿಂದು ಪಡೆದು ಧನ್ಯನಾದವನು.

ಮಾತಿನ ವರಸೆ ಚೆನ್ನಾಗಿದೆ. ಮಾತಿನ ಮರ್ಮ ಬಲ್ಲವರೆಂದೇ ಕಾಣುತ್ತದೆ. ಕಣ್ಣುಗಳಲ್ಲಿ ಹೊರ ಹೊಮ್ಮುತ್ತ ಹೊಳೆಯುತ್ತಿರುವ, ಕಮನೀಯ ಪ್ರಭೆ ಕಂಡರೆ, ಅಪರೋಕ್ಷ ಜ್ಞಾನಿಗಳೆಂಬುದು ಸ್ಪಷ್ಟವಾಗುತ್ತಿದೆ. ತಮ್ಮ ನಾಮಧೇಯ ಶ್ರವಣದಿಂದ ನಾನು ಧನ್ಯನಾಗಬಯಸುವುದು ಸೂಕ್ತವಲ್ಲವೇನು ?

ಎಂತಹ ಮಾತು -- ಗೋವಿಂದ, ಗೋವಿಂದ -- ತಮ್ಮ ಅಭಿಮಾನಕ್ಕೆ ನಾನು ಚಿರಕೃತಜ್ಞ. ತಾವು

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ | ~~6--00 ಪ್ರಾ 6--30~~ |
| ಸಹಸ್ರನಾಮಾರ್ಚನ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ನನ್ನೊಡನೆ ಮಾತಾಡಿದ್ದೇ ಒಂದು ಕೃಪೆ. ಅದೇ ಒಂದು ಸೌಭಾಗ್ಯ. ನನ್ನನ್ನು ಪುರಂದರದಾಸನೆಂದು ಕರೆಯುತ್ತಾರೆ.

ಮಣಿಮಾಣಿಕ್ಯಗಳ ವ್ಯಾಪಾರ ಮಾಡುವುದನ್ನು ಬಿಟ್ಟು ಗೋಪಾಲ ಚೂಡಾಮಣಿಗೆ ಸರ್ವಸ್ವವನ್ನೂ ಸಮರ್ಪಿಸಿದ ತ್ಯಾಗಪುರುಷರು ತಾವು. ಒಂದು ಕಾಲದಲ್ಲಿ ನವಕೋಟಿನಾರಾಯಣ ಬಿರುದಾಂಕಿತರು. ಇಂದು ತಮ್ಮ ದರ್ಶನಭಾಗ್ಯವನ್ನು ಶ್ರೀನಿವಾಸನೇ ಒದಗಿಸಿದ್ದಾನೆ. ಧನ್ಯೋಸ್ಮಿ--ಧನ್ಯೋಸ್ಮಿ

ನಾನು ತಮ್ಮ ಬಗ್ಗೆ ಕೆಲವು ವಿಚಾರಗಳನ್ನು ತಿಳಿದುಕೊಳ್ಳ ಬಯಸುತ್ತೇನೆ. ಕೃಪೆ ಮಾಡಿ ತಿಳಿಸೋಣವಾಗಬೇಕು.

ನಾನೇನೂ ಅಷ್ಟು ದೊಡ್ಡವನಲ್ಲ. ಆದರೆ ತಮ್ಮ ಅಭಿಪ್ರಾಯವನ್ನು ತಳ್ಳಿಹಾಕುವಷ್ಟು ಧೈರ್ಯವೂ ಇಲ್ಲ. ಅಪ್ಪಣೆಯಾದರೆ ನನ್ನ ಅಲ್ಪ ಮತಿಗೆ ತೋಚಿದ್ದನ್ನು ಹೇಳುತ್ತೇನೆ.

ಪೂರ್ವಾಶ್ರಮದ ಬಗ್ಗೆ ಏನಾದರೂ ತಿಳಿಸಲಿಷ್ಟಪಡುವಿರಾ ?

[illegible] ಕೈವಲ್ಯ. ನನ್ನ ವಿಚಾರ ತಿಳಿದುಕೊಳ್ಳಲು ನಿಮಗೇಕಿಷ್ಟು ಕುತೂಹಲ ?

ಹಿರಿಯರ ವಿಷಯ ತಿಳಿಯಲು ಕಿರಿಯರಿಗೆ ಕುತೂಹಲ ಸಹಜ. ಆ ಮಾತು ಹಾಗಿರಲಿ. ತಮ್ಮ ತಂದೆ ತಾಯಿ ಯಾರು ?

ನನ್ನ ತಂದೆಯ ಹೆಸರು ನಾರಣಯ್ಯ. ತಾಯಿ ಲಕ್ಕಮಾಂಬ. ಈಗಂತೂ ನನ್ನ ತಂದೆ ತಾಯಿ ಎಲ್ಲವೂ ಶ್ರೀನಿವಾಸನೆ. ನಾನು ಬಹು ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡು ತಾಯಿಯ ಅಕ್ಕರೆಯ ಮಡಿಲಲ್ಲೇ ಬೆಳೆದವನು.

ನನ್ನ ಗುರುಗಳಾದ ವ್ಯಾಸರಾಯ ಸ್ವಾಮಿಗಳು ನಿಮ್ಮ ಬಗ್ಗೆ ಆಗಾಗ ಹೇಳುತ್ತಿದ್ದರು.

ಯಾರು -- ವ್ಯಾಸರಾಯಸ್ವಾಮಿಗಳೇ ? ಆ ಪೂಜ್ಯರು ನನ್ನ ವಿಷಯ ಹೇಳುತ್ತಿದ್ದರೇ ? ಅವರ ದರ್ಶನ ಭಾಗ್ಯ ಲಭ್ಯವಾದದ್ದೇ ಒಂದು ಸೌಭಾಗ್ಯ ಅದೆಂದೂ ಮರೆಯಲಾಗದ ಸುದಿನ.

ಹೌದಂತೆ. ಅವರೂ ಹಾಗೇ ಹೇಳುತ್ತಿದ್ದರು. ನೀವು ಜೋಗುಳ ಹಾಡುತ್ತಿದ್ದಿರಂತೆ. ಲೀಲಾ ವಿನೋದಿಯಾದ ಶ್ರೀಹರಿ, ಬಾಲಗೋಪಾಲನಾಗಿ ತೊಟ್ಟಿಲಲ್ಲಿ ಮಲಗಿ, ನಿಮ್ಮ ಗಾನಾಮೃತ ಕೇಳಿ ಆನಂ

ದಿಸುತ್ತ, ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ನಸುನಗುತ್ತಿದ್ದನಂತೆ. ನಮ್ಮ ಗುರುಗಳು ಆ ದಿವ್ಯ ಸುಂದರ ದೃಶ್ಯವನ್ನು ಕಂಡು ಪುಳಕಿತರಾದರಂತೆ. ಇದನ್ನವರು ಪದೇಪದೇ ಹೇಳುತ್ತಿದ್ದರು.

ಎಲ್ಲವೂ ಆತನ ಕರುಣೆ -- ಆತನ ಅನುಗ್ರಹ.

ತಮ್ಮ ಮನಸ್ಸಿಗೆ ನೋವಾಗುವಂತಹ ಘಟನೆಗಳು ಜೀವನದಲ್ಲಿ ಯಾವುದಾದರೂ ನಡೆದಿವೆಯೆ -- ಈ ಪ್ರಶ್ನೆಗೆ ತಾವು ಬೇಸರಪಟ್ಟುಕೊಳ್ಳಬಾರದು.

ಜೀವನದಲ್ಲಿ ದುಃಖದ ಅಂಶ ಸಾಗರದಷ್ಟು, ಸುಖದ ಅಂಶ ಸಾಸಿವೆಯಷ್ಟು. ಅದೂ ಸಹ ತಾತ್ಕಾಲಿಕ ಹಾಗೂ ದುಃಖ ಮಿಶ್ರಿತ. ದುಃಖದ ಲೇಪವಿಲ್ಲದ ಶುದ್ಧ ಸುಖವೆಂಬುದು ಜಗತ್ತಿನಲ್ಲಿ ಯಾವುದಿದೆ ? ಪಡುವ ನೋವೆಲ್ಲ ಬಾಳೆಂಬ ಸಾಧನೆಯ ಒಂದಂಶವೆಂದು ಭಾವಿಸಿಕೊಂಡರಾಯ್ತು. ವಸ್ತುತಃ ನೋವೆಂದರೇನು -- ನಲಿವೆಂದರೇನು ? -- ಮನಸ್ಸು ಹೇಗೆ ಭಾವಿಸಿಕೊಂಡರೆ ಹಾಗೆ.

ವಿಜಯನಗರದ ಸಾಳ್ವನರಸಿಂಹರಾಯ ತಮಗೆ ತುಂಬ ಅಪಚಾರ ಮಾಡಿದ್ದನಂತೆ .....

ವ್ಯಕ್ತಿ ತನ್ನ ಅಭಿಪ್ರಾಯಕ್ಕೆ ಮನ್ನಣೆ ದೊರೆಯದೆ ಹೋದಾಗ ಅಸಮಾಧಾನ ಮಾಡಿಕೊಳ್ಳುತ್ತಾನೆ. ಅದು ಅಪಕ್ವ ಬುದ್ಧಿಯ ಲಕ್ಷಣ. ಆಳರಸರು ಅಸಮಾಧಾನ ಪಟ್ಟಾಗ ಇತರರಿಗೆ ಶಿಕ್ಷೆ ವಿಧಿಸುತ್ತಾರೆ. ಇದು ಅವರ ಅಧಿಕಾರ ದರ್ಪದ ಲಕ್ಷಣ. ಸಾಳ್ವನರಸಿಂಹರಾಯ ನನ್ನನ್ನು ಸೆರೆಮನೆಯಲ್ಲಿಟ್ಟಿದ್ದ. ನಾನು ಮಾಡಿದ ಅಪರಾಧವೇನು ಗೊತ್ತೇ ? ನನ್ನ ಕೃತಿಗಳನ್ನು ರಾಜನಿಗೆ ಅಂಕಿತಮಾಡುವುದು ಸೂಕ್ತವಲ್ಲವೆಂಬ ಅಭಿಪ್ರಾಯವನ್ನು ನಿರ್ಭಯವಾಗಿ ಸೂಚಿಸಿದ್ದು. ಕಾರಾಗೃಹವಾಸ ನನಗೊಂದು ಸಾಧನಭೂಮಿಯಾಯ್ತು -- ಆ ಕಥೆ ಬೇರೆ.

ತಮ್ಮಸ್ಥಳ ಕಡಪಮಂಡಲದ ತಾಳ್ಳಪಾಕಂ ಎಂಬ ಗ್ರಾಮವೆಂದು ಕೇಳಿದ್ದೇನೆ. ಆ ಪ್ರಾಂತವೆಲ್ಲ ಚಂದ್ರಗಿರಿಯ ರಾಜರ ವಶದಲ್ಲಿತ್ತಲ್ಲವೇ ?

ಹೌದು ಚಂದ್ರಗಿರಿಯರಸರು -- ಸೇನಾಪತಿಗಳು..... ಎಲ್ಲರೂ ನನಗೆ ಪರಿಚಿತರಾಗಿದ್ದವರು. ಸೇನಾಧ್ಯಕ್ಷನಾದ ನರಸನಾಯಕ ತನ್ನ ಪತ್ನಿಯಾದ ನಾಗಲಾಂಬೆಯ ಸಹಿತ ಪೆನುಗೊಂಡೆಗೊಂದು ಸಲ ಬಂದಿದ್ದ.

ತಾವು ಪೆನುಗೊಂಡೆಯಲ್ಲಿದ್ದಿರೇನು ?

ಸಾಳ್ವರಾಜನ ಕೃಪೆ, ನಾನು ಬಂಧನದಲ್ಲಿದ್ದುದೇ ಪೆನುಗೊಂಡೆಯಲ್ಲಿ. ಸೇನಾಪತಿ ದಂಪತಿಗಳು ನನ್ನನ್ನು ಕಾಣಲೆಂದು ಕಾರಾಗೃಹಕ್ಕೇ ಬಂದಿದ್ದರು. ಆಗ ಅವರ ಚಿರಂಜೀವಿಯೂ ಬಂದಿದ್ದ. ಅವ ನನ್ನು ನಿಮ್ಮಗುರುಗಳಾದ ವ್ಯಾಸರಾಯಸ್ವಾಮಿಗಳು ಪರಮ ಕರುಣೆಯಿಂದ ಕಾಪಾಡಿದರೆಂದು ಕೇಳಿದ್ದೆ.

ಗುರುಗಳು ಕಾಪಾಡಿದ್ದು ವಿಜಯನಗರಾಧೀಶ್ವರನಾದ ಸಂಗೀತ ಸಾಹಿತ್ಯಕಲಾಪೋಷಕನಾದ -- ದಿಗಂತವಿಶ್ರಾಂತಕೀರ್ತಿಸಂಪನ್ನನಾದ -- ಕೃಷ್ಣದೇವರಾಯರನ್ನಲ್ಲವೇ ?

ನಾನೂ ಅದೇ ಹೇಳುತ್ತಿರುವುದು. ನಾನವನನ್ನು ಕಂಡಾಗ ಅವನಿನ್ನೂ ೬-೭ ವರ್ಷದ ಹುಡುಗ. ವಿಖ್ಯಾತ ಸಾಮ್ರಾಜ್ಯಕ್ಕಧಿಪತಿಯಾಗುವನೆಂಬ ಕಲ್ಪನೆಯೂ ಆಗ ಬಂದಿರಲಾರದು. ಆದರೆ ಅವನು ಲೋಕಪ್ರಸಿದ್ಧ ಚಕ್ರವರ್ತಿಯಾಗುತ್ತಾನೆಂದು ನಾನಾ ಬಾಲಕನ ಭವಿಷ್ಯವನ್ನಂದೇ ಕಂಡಿದ್ದೆ. ಅವರ ತಂದೆ ತಾಯಿಗೆ ಹೇಳಿಯೂ ಇದ್ದೆ..... ಆಯ್ತು. ಅದೆಲ್ಲ ಒಂದು ಕಾಲ. ಈಗ ನನಗದರಿಂದ ಆಗಬೇಕಾದ್ದೇನೂ ಇಲ್ಲ.

ಆಚಾರ್ಯರು ಮನ್ನಿಸಬೇಕು. ತಮ್ಮಪದಕವಿತಾ ಲಾಲಿತ್ಯಕ್ಕೆ ಶಬ್ದಪ್ರಮಾಣ ಪ್ರೌಢಿಮೆಗೆ, ಸುಕುಮಾರ






ಭಾವಪೋಷಣೆಗೆ, ಆದ್ಯಂತವಾಗಿ ಪ್ರವಹಿಸುವ ಭಕ್ತಿರಸ ಧಾರೆಗೆ -- ತನ್ಮಯತೆಗೆ -- ಪರಿಪೂರ್ಣ ಆನಂದಾನುಭವಕ್ಕೆ ಮಾರುಹೋದ ಸಾವಿರಾರು ಮಂದಿಯಲ್ಲಿ ನಾನೂ ಒಬ್ಬ. ನನ್ನ ಒಂದು ಮನವಿ ಸನ್ನಿಧಾನದಲ್ಲಿ ವಿಜ್ಞಾಪಿಸಬೇಕೆಂದು ಬಾಲಕ ಸಹಜವಾದ ಚಾಪಲ್ಯವಿದೆ.

ವಿನಯದರಮನೆಗೆ ಸೌಜನ್ಯದ ಕಳಶವಿಟ್ಟಂತಿದೆ -- ನಿಮ್ಮಮಾತು. ಅಭಿಪ್ರಾಯವೇನೆಂದು ಸ್ಪಷ್ಟಪಡಿಸಿದರೆ ಕೇಳಿ ಧನ್ಯನಾಗುತ್ತೇನೆ.

ನಿಮ್ಮ ಕವಿತೆಗಳ ಪ್ರಭಾವ ನನ್ನ ಕೃತಿಗಳ ಮೇಲೆ ಬಿದ್ದರೆ -- ನಾನು ನಿಮ್ಮ ಅಮೂಲ್ಯ ಕೃತಿಗಳಿಂದ ಭಾವ ಗ್ರಹಣ ಮಾಡಿದರೆ ಅದು ತಮಗೆ ಅಸಮಾಧಾನವಾಗಲಾರದಷ್ಟೆ.

ದಯಾನಿಧಿಯಾದ ದಾಸವರೇಣ್ಯರೇ, ಅದೆಂತಹ ಮಾತು ? ಭಾಷೆ ಮಾನವ ನಿರ್ಮಿತ. ಭಾವನೆಗಳು ದೇವ ನಿರ್ಮಿತ, ದೈವೀಭಾವನೆಗಳು ಯಾರೊಬ್ಬರ ಸ್ವತ್ತೂ ಅಲ್ಲ. ಅದಕ್ಕೆ ಭಾಷಾ ಬಂಧನವೂ ಇಲ್ಲ. ಯಾರ್ಯಾರು ಯಾವ್ಯಾವ ಪಾತ್ರವನ್ನು ವಹಿಸಬೇಕು -- ಹೇಗೆ ನಿರ್ವಹಿಸಬೇಕು -- ಎಂಬುದೆಲ್ಲ ಪೂರ್ವ ನಿಶ್ಚಿತ ಸಂಗತಿಗಳು. ಭಾವಗ್ರಹಣವೆಂದಾಗ ನಾನೇಕೆ ಅಸಮಾಧಾನ ಪಡಬೇಕು? ಅನ್ತರಂಗದಲ್ಲೂ ಬಹಿರಂಗದಲ್ಲೂ, ಭಾವದಲ್ಲೂ, ಬಾಹ್ಯದಲ್ಲೂ ಭಗವಂತನನ್ನು ಕಾಣುವುದು ತಾನೆ ಎಲ್ಲ ಶಾಸ್ತ್ರಗಳ -- ಎಲ್ಲ ಸಂಗೀತದ -- ಎಲ್ಲ ಸಾಹಿತ್ಯದ ಮೂಲಗುರಿ. ಮುಖ್ಯ ತತ್ತ್ವ ?

ಮಹಾತ್ಮರೇ -- ತಮ್ಮ ಅಮೂಲ್ಯ ಸಲಹೆಗೆ, ಮಾರ್ಗದರ್ಶನಕ್ಕೆ ನಾನು ಕೃತಜ್ಞನಾಗಿದ್ದೇನೆ. ತಾವು ದೇಶಾಕ್ಷಿರಾಗದಲ್ಲಿ ಬರೆದಿರುವ ದಿವ್ಯ ಕವಿತೆ -- ನೀವೇ ನೇರವು ಕಾನಿ -- ಎಂಬ ಕವಿತೆ ನನ್ನನ್ನು ಬಹುವಾಗಿ ಆಕರ್ಷಿಸಿದೆ. ಅದರ ಒಂದು ಚರಣವಂತೂ ನನ್ನ ಮೇಲೆ ಬಹುವಾಗಿ ಪ್ರಭಾವ ಬೀರಿದೆ.

ಯಾವುದಾಚರಣ ?

ಚೆರುವುಲ ನೀಳ್ಳು ತೆಚ್ಚಿ
ಚೇರೆಡು ನೀ ಪೈಚಲ್ಲಿ
ವರಮು ಪೊಂದಿತಿಮಿ ವಲಸಿನಟ್ಟು
ನೀವು ನಿರ್ಮಿಂಚೆನದಿ ನೀಕೇ
ಸಮರ್ಪಣ ಜೇಸಿ
ಸೋವಲ ನೀ ಕೃಪಯೆಲ್ಲ
ಜೊರಗೊಂಟಿಮಿ

ತಮ್ಮ ಕವಿತೆಯ ಅಭಿಪ್ರಾಯವನ್ನು ನಾನು ಕನ್ನಡ ಭಾಷೆಯಲ್ಲಡಗಿಸಿದ್ದೇನೆ---

ಕೆರೆಯ ನೀರನು ಕೆರೆಗೆ ಚೆಲ್ಲಿ
ವರವಪಡೆದವರಂತೆ ಕಾಣಿರೊ
ಹರಿಯ ಕರುಣದೊಳಾದ ಭಾಗ್ಯವ
ಹರಿಸಮರ್ಪಣೆ ಮಾಡಿ ಬದುಕಿರೊ

ನಿಮ್ಮ ಕವಿತೆ -- ಇಪ್ಪಡಿಟು ಕಲಗಂಟಿಯೆಂಬುದರಭಿಪ್ರಾಯವನ್ನು -- ಕಂಡೆ ನಾ ಕನಸಿನಲಿ ಗೋವಿಂದನ -- ಎಂದು ರೂಪಿಸಿದ್ದೇನೆ. ನನ್ನ ಆರಾಧ್ಯ ದೇವನಾದ ಶ್ರೀಕೃಷ್ಣನನ್ನು ನವರತ್ನಗಳಿಗೆ ಹೋಲಿಸಿ ರಚಿಸಿರುವ ಕವಿತೆಯಂತೂ ತಮ್ಮ ದಿವ್ಯ ಪ್ರತಿಭೆಗೆ ಸಮುಜ್ವಲ ಸಾಕ್ಷಿಯಾಗಿದೆ.

ಯಾವುದಾಗೀತೆ? ನಾನೇ ಮರೆತಿದ್ದೇನೆ. ಮರವು ವಯಸ್ಸಿನ ಪರಿಣಾಮವಿರಬಹುದು.

ಆ ದಿವ್ಯ ಕವಿತೆಯ ಭಾವ ಹೀಗಿದೆ-- ಶ್ರೀಕೃಷ್ಣನೆಂದರೇನು ? ಈ ದೇವಕೀಸುತ ಮುದ್ದು ಯಶೋದೆಯ ಮುಂದೆ ನಿಂತಿರುವ ಆಣಿಮುತ್ತು. ಗೋಪಲಲನೆಯರ ಅಂಗೈಯಲ್ಲಿರುವ ಮಾಣಿಕ್ಯ. ಪಂತ ಹಾಕಿ ನಿಂತ ಕಂಸನಿಗೆ ವಜ್ರ. ಮೂರು ಲೋಕದ ಲಲನಾಮಣಿಯರು ಪಡೆಯ ಬಯಸುವ ಪಚ್ಚೆ. ವಿಲಾಸವೇಳೆಯಲ್ಲಿ ಹವಳದುಟಿಯ ರುಕ್ಮಿಣಿಗೆ ಈತ ಹವಳ. ಗೋವರ್ಧನದ ಮೇಲೊಂದು ಗೋಮೇಧಿಕಮೀತ. ಈತ ಶಂಖುಚಕ್ರ ಧರಿಸಿದ ವೈಡೂರ್ಯ ವಿಗ್ರಹ. ಕಾಳಿಂಗನ ಹೆಡೆಯಮೇಲೆ ಹೊಳೆಯುವಂತಹ ಪುಷ್ಯರಾಗ. ಅಷ್ಟೇ ಅಲ್ಲ. ವೇಂಕಟಾದ್ರಿಯ ಮೇಲೆ ಮೆರೆಯುವ ಇಂದ್ರ ನೀಲಮಣಿ ವಿಗ್ರಹ. ಈತ -- ಕ್ಷೀರಾಬ್ಧಿ ಮಥನ ಕಾಲದಲ್ಲಿ ಬಂದ ಸಣ್ಣ ಪಣ್ಣ ಮಣಿ ಮಾಣಿಕ್ಯಗಳಂತಲ್ಲ.

ಹೌದು; ಕವಿತೆ ಈಗ ನೆನಪಾಗುತ್ತಿದೆ. ಅದು ನಾನು ಕಂಡ ದೃಶ್ಯ. ಬಾಲ ಮುಕುಂದನನ್ನು ವಿವಿಧ ರೂಪಗಳಲ್ಲಿ -- ವಿವಿಧ ಭಂಗಿಗಳಲ್ಲಿ ಕಂಡು ಧನ್ಯವಾಗಿದ್ದೇನೆ. ಅದು ಹಾಗಿರಲಿ; ನೀವು ಕರ್ನಾಟಕ ಸಂಗೀತ ಸಂಪ್ರದಾಯಕರು. ನೀವು ರಚಿಸಿದ ಪಿಳ್ಳಾರಿಗೀತೆಗಳನ್ನು ಎಲ್ಲ ಸಂಗೀತಾಭ್ಯಾಸಿಗಳೂ ಕಲಿಯಲೇಬೇಕು. ಸಂಗೀತ ಶಿಕ್ಷಣಕ್ಕೆ ಬುನಾದಿಹಾಕಿದ ವಿದ್ವಾಂಸರು ತಾವು.

ತಮ್ಮ ಅಭಿಮಾನಕ್ಕೆ ಕೃತಜ್ಞ ನಾಗಿದ್ದೇನೆ. ಭಾವಗ್ರಹಣದ ವಿಚಾರದಲ್ಲಿ ತಾವು ನನ್ನ ಮನಸ್ಸಿಗೆ ಧೈರ್ಯದಾನಮಾಡಿದಿರಿ. ತಮ್ಮ ಸೌಜನ್ಯಕ್ಕೆ ನಾನು ಆಭಾರಿ.

ವೆಂಕಟೇಶ -- ತಿರುವೇಂಕಟಾಧೀಶ ಇತ್ಯಾದಿ ಅಂಕಿತಗಳಲ್ಲಿ ಕೀರ್ತನೆ ಬರೆಯಬೇಕೆಂದು ನನಗೆ ಅಪ್ಪಣೆಯಾಯ್ತು. ಪುರಂದರ ವಿಠಲನೆಂಬ ಅಂಕಿತದಲ್ಲಿ ಕೀರ್ತನೆ ರಚಿಸಬೇಕೆಂದು ನಿಮಗೆ ಆಜ್ಞೆಯಾಗಿದೆ. ಶ್ರೀನಿವಾಸನ ಅಪ್ಪಣೆಯಂತೆ ನಡೆಯುವುದಷ್ಟೇ ನಮ್ಮ ಕೆಲಸ. ನಾವೆಲ್ಲ ಪಾತ್ರಧಾರಗಳು. ಆತನೇ ಸೂತ್ರಧಾರಿ. ಆತನ ನಾಟಕ ಚೆನ್ನಾಗಿ ಸಾಗಬೇಕಾದರೆ, ಪಾತ್ರಗಳಿಗೆ ಆತನೇ ಮಾತು ಕಲಿಸುತ್ತಾನೆ. ಅಲ್ಲವೇ ದಾಸವರ್ಯರೇ ?

ಹೌದು ಆಚಾರ್ಯ. ಆ ಸರ್ವಶಕ್ತಿಗೆ ಕೋಟಿ ನಮನಗಳು.

ಮಾತಾಡುತ್ತಿರುವವರಲ್ಲಿ ಅನ್ನಮಾಚಾರ್ಯರು ಸುಮಾರು ಎಂಭತ್ತು ವಯಸ್ಸಿನವರು. ಪುರಂದರದಾಸರು ಸುಮಾರು ಅರ್ಧ ಶತಮಾನದವರು. ವಾಗ್ಗೇಯಕಾರ ಶಿಖಾಮಣಿಗಳಿಬ್ಬರ ಈ ಮಾತುಕತೆ ನಡೆದದ್ದು ಶತಮಾನಗಳ ಹಿಂದೆ. ಈ ಮಧ್ಯೆ ರಾಜ್ಯ ಸಾಮ್ರಾಜ್ಯಗಳುರುಳಿಹೋಗಿರಬಹುದು. ಜೀವನದ ಮೌಲ್ಯಗಳು ಮಾರ್ಪಾಟಾಗಿರಬಹುದು. ಆದರೇನಂತೆ ? ಈ ಮಹಾತ್ಮರಿಬ್ಬರೂ ಅಮರಜೀವಿಗಳು. ಧನ್ಯಾತ್ಮರು. ಸಂಗೀತ ಜಗತ್ತಿನ ದಿವಾಕರ ಸುಧಾಕರರು. ಪ್ರಾತಃಸ್ಮರಣೀಯರಾದ ಪುಣ್ಯಜೀವಿಗಳು. (1985 ಸಪ್ತಗಿರಿ)



# ದಧೀಚಿ ಋಷಿ

---ಕಂದಾಡೈ ಕೇಶವನ್.

ಇಂದ್ರ ದಧೀಚಿಯ ಮೂಳೆಗಳನ್ನು ಬಳಸಿ ೯೯ ಶತ್ರುಗಳನ್ನು ಕೊಂದ ಎಂಬುವುದಾಗಿ ಉಲ್ಲೇಖವಿದೆ. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮ ಮಾನಸ ಪುತ್ರನಾದ ಅಥರ್ವಣ ಮಹರ್ಷಿಗೆ ಕರ್ದಮ ಪುತ್ರಿಯಾದ ಶಾಂತಿ ಎಂಬುವಳಲ್ಲಿ ಜನಿಸಿದ ಋಷಿಯೇ, ದಧೀಚಿ. ದೃಢವ್ರತ ಅಥರ್ವಶಿರ ಇವರು ದಧೀಚರ ಅಣ್ಣತಮ್ಮಂದಿರು. ದಧೀಚರು ತಮ್ಮತಂದೆಯಿಂದ ವೇದವೇದಾಂಗಗಳನ್ನು ಅಭ್ಯಾಸಮಾಡಿದ ಧೀಮಂತ ಮಹರ್ಷಿ, ಮಹಾತಪಸ್ವಿ. ಈತನು ಶುದ್ಧ ಬ್ರಹ್ಮಚಾರಿ ಮತ್ತು ಜಿತೇಂದ್ರಿಯ. ಈತನ ನಿಷ್ಠೆ, ಅಪಾರ ತಪಸ್ಸಿಗೆ ಮೆಚ್ಚಿ ಇಂದ್ರನು ದಧೀಚಿಗೆ ಬ್ರಹ್ಮ (ಮಧು) ವಿದ್ಯೆಯನ್ನು ಉಪದೇಶಮಾಡಿ ಇದನ್ನು ಬೇರೆಯವರಿಗೆ ತಿಳಿಸಿದರೆ ತಲೆ ಉರುಳಿಹೋಗುವುದೆಂದು ತಿಳಿಸಿದ್ದ. ಆದರೆ ಒಮ್ಮೆ ಅಶ್ವಿನೀದೇವತೆಗಳು ದಧೀಚಿ ಋಷಿಯನ್ನು ಕಂಡು ತಮಗೆ ಮಧುವಿದ್ಯೆಯನ್ನು ಉಪದೇಶಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಇಂದ್ರನ ಶಾಪ ವಿಚಾರವನ್ನು ಋಷಿ ಅಶ್ವಿನೀದೇವತೆಗಳಿಗೆ ತಿಳಿಸಿದನು. ಅಶ್ವಿನೀದೇವತೆಗಳಾದರೋ ದಧೀಚಿಯ ತಲೆಯನ್ನು ತೆಗೆದು ಅದರ ಸ್ಥಳದಲ್ಲಿ ಕುದುರೆ ತಲೆ ಜೋಡಿಸಿ ಋಷಿಯಿಂದ ಬ್ರಹ್ಮವಿದ್ಯೆಯನ್ನು ಕಲಿತರು. ತದನಂತರ ಋಷಿಯ ತಲೆಯನ್ನು ತಮ್ಮ ಮಂತ್ರವಿದ್ಯೆಯಿಂದ ಜೋಡಿಸಿ ತಮ್ಮ ಸ್ವಸ್ಥಾನಕ್ಕೆ ತೆರಳಿದರು. ಅಶ್ವಿನೀದೇವತೆಗಳು ದಧೀಚಿಯಿಂದ ಬ್ರಹ್ಮವಿದ್ಯೆಯನ್ನು ಕಲಿತರು ಎಂಬುವುದನ್ನು ಅರಿತ ಇಂದ್ರ ಕುಪಿತನಾಗಿ ದಧೀಚಿಯ ತಲೆಯನ್ನು ಕತ್ತರಿಸಿದನು. ಇದನ್ನು ತಿಳಿದ ಅಶ್ವಿನೀದೇವತೆಗಳು ಮತ್ತೆ ತಮ್ಮ ಮಂತ್ರ ಪ್ರಭಾವದಿಂದ ತರಿದ ರುಂಡವನ್ನು ಜೋಡಿಸಿ ದಧೀಚಿಯನ್ನು ಬದುಕಿಸಿದರು. ದಧೀಚಿ ಮಹಾತೇಜಸ್ವಿಯಾಗಿ ಸರಸ್ವತೀನದೀತೀರದಲ್ಲಿ ಘೋರ ತಪಸ್ಸನ್ನು ಆಚರಿಸುತ್ತಿದ್ದನು. ಈ ವಿಷಯನ್ನು ತಿಳಿದ ಇಂದ್ರನು ಹಿಂದಿನ ಮತ್ಸರವನ್ನು ತಳೆದು ಮತ್ತೆ ದಧೀಚಿಯ ತಪೋಭಂಗವನ್ನು ಮಾಡಲು ಅಲಂಬಸೆಯೆಂಬ ದಿವ್ಯ ಅಪ್ಸರೆ ಕನ್ನೆಯನ್ನು ಕಳುಹಿಸಿದನು. ಈಕೆಯ ಸೌಂದರ್ಯವನ್ನು ಕಂಡ ದಧೀಚಿಯ ಮನಸ್ಸು ಸ್ಖಲಿತವಾಯಿತು. ಆಕೆಯ ದಿವ್ಯ ಸುಂದರ ದೇಹಕ್ಕೆ ಹಾತೊರೆದನು. ಆಗ ಋಷಿಯ ರೇತಸ್ಸು ಜಾರಿತು. ಸರಸ್ವತೀ ನದಿಯ ತೀರದಲ್ಲಿ ಆ ರೇತಸ್ಸು ಜಾರಿ ನದಿಯಲ್ಲಿ ಬಿತ್ತು. ಸರಸ್ವತೀ ಮಹಾನದಿ ಪುತ್ರಕಾಮಳಾಗಿ ಆ ರೇತಸ್ಸನ್ನು ತನ್ನ ಕುಕ್ಷಿಯಲ್ಲಿ ಧರಿಸಿದಳು. ನವಮಾಸಗಳು ತುಂಬಿದಾಗ ಸಾರಸ್ವತ ಮುನಿಯನ್ನು ಹಡೆದಳು. ಸರಸ್ವತಿಯು ಮಗುವನ್ನು ದಧೀಚಿ ಆಶ್ರಮಕ್ಕೆ ತಂದು "ಹೇ ಮಹರ್ಷಿ, ಈ ಮಗು ನಿನ್ನ ಮಗ. ನಿನ್ನ ರೇತಸ್ಸು ಜಾರಿದಾಗ ಅದು ವ್ಯರ್ಥವಾಗಬಾರದೆಂದು ನಾನು ಧರಿಸಿದೆ. ಅದರ ಫಲವೇ ಈ ತೇಜಸ್ವಿಯಾದ ಮಗು. ನಿನ್ನ ಪುತ್ರನನ್ನು ಸ್ವೀಕರಿಸು, ನನ್ನನ್ನು ಉದ್ಧಾರಮಾಡು" ಎಂಬುದಾಗಿ ಬೇಡಿಕೊಂಡಳು. ತೇಜಸ್ವಿಯಾದ ಮಗುವನ್ನು ಕಂಡು ದಧೀಚಿ ಸ್ವೀಕರಿಸಿದನು. ದಧೀಚಿಯು ಸರಸ್ವತೀ ಮಹಾನದಿಯನ್ನು ಕುರಿತು "ಹೇ ತೇಜಸ್ವಿನಿ, ಯಾವ ಮನುಷ್ಯನು ನಿನ್ನ ಜಲದಿಂದ ಪಿತೃಗಳಿಗೆ ತರ್ಪಣವನ್ನು ಕೊಡುತ್ತಾನೋ ಅಂತಹ ಪಿತೃಗಣಗಳು ವಿಶ್ವದೇವತೆಗಳು ತೃಪ್ತಿಹೊಂದುವರು" ಎಂಬ ವರವನ್ನು ನೀಡಿದನು. "ನಿನ್ನಲ್ಲಿ ಜನಿಸಿದ ಈ ಮಗು ನಿನ್ನ ಹೆಸರಿನಲ್ಲೇ ಸಾರಸ್ವತ ಮುನಿಯೆಂದು ಲೋಕವಿಖ್ಯಾತನಾಗುತ್ತಾನೆ. ಈ ತಪಸ್ವಿ ಮುಂದೆ ಹನ್ನೆರಡುವರ್ಷ ಅನಾವೃಷ್ಟಿ ತಲೆದೋರಿದಾಗ ದ್ವಿಜರಿಗೆ ವೇದಗಳನ್ನು ಹೇಳಿಕೊಟ್ಟು ಲೋಕದ ಕೊರತೆ ನೀಗುತ್ತಾನೆ. ಸರಸ್ವತಿಯೇ ನೀನು ಎಲ್ಲಾ ನದಿಗಳಗಿಂತ ಪುಣ್ಯಕರಳು ಆಗುವೆ" ಎಂದನು. ಮುಂದೆ ಸಾರಸ್ವತ ಋಷಿಯು ಇರುವ ಸ್ಥಳದಲ್ಲಿ ಕ್ಷಾಮದ ಬಾಧೆಯಿರಲಿಲ್ಲ. ಅನಾವೃಷ್ಟಿಯ ಹೆಸರಿರಲಿಲ್ಲ. ಧರ್ಮದೇವತೆ ಸಂತೋಷವಾಗಿದ್ದಳು. ಕೃತಯುಗದಲ್ಲಿ ಕಾಲೇಯರೆಂಬ ರಾಕ್ಷಸರು ವೃತ್ರಾಸುರನನ್ನು ಆಶ್ರಯಿಸಿ ಅವನ ಸಹಾಯದಿಂದ ದೇವೇಂದ್ರನನ್ನು ಸೋಲಿಸಿ ದೇವತೆಗಳಿಗೆ ಅತಿ ಭಯಂಕರರಾಗಿ ಮೆರೆಯುತ್ತಿದ್ದರು. ವೃತ್ರಾಸುರನು ಬ್ರಹ್ಮನಿಂದ ವರವನ್ನು ಪಡೆದು ಇಂದ್ರನನ್ನು ತನ್ನ ಶಕ್ತಿ ಸಾಮರ್ಥ್ಯದಿಂದ ಸೋಲಿಸಿದ್ದನು. ವೃತ್ರಾಸುರನ ಉಪಟಳವನ್ನು ತಾಳಲಾರದೆ ದೇವತೆಗಳು ಬ್ರಹ್ಮನ ಬಳಿಗೆ ಬಂದು ತಮ್ಮ ಅಳಲನ್ನು ತೋಡಿಕೊಂಡರು. ಆಗ ಬ್ರಹ್ಮದೇವರು "ದೇವತೆಗಳಿರಾ, ವೃತ್ರಾಸುರನ ವಧೆಗೆ ಒಂದೇ ಉಪಾಯವು ಇದೆ. ಭೂಲೋಕದಲ್ಲಿ ಸರಸ್ವತೀ ನದಿಯತೀರದಲ್ಲಿ ದಧೀಚಿ ಮಹರ್ಷಿ ತಪಸ್ಸನ್ನು ಆಚರಿಸುತ್ತಿದ್ದಾನೆ. ನೀವೆಲ್ಲರೂ ಇಂದ್ರನೊಡನೆ ಆ ಋಷಿಯ ಬಳಿಗೆ ಹೋಗಿ ಒಂದು ವರವನ್ನು ಬೇಡಿಕೊಳ್ಳಿ, ಆ ಮಹರ್ಷಿ ಅಸ್ತು ಅಂದಾಗ ಸಕಲ ಜಗತ್ತಿಗೆ ಒಳ್ಳೆಯದಾಗಲು ವೃತ್ರಾಸುರನ ಸಂಹಾರಕ್ಕಾಗಿ ಆ ಋಷಿಯ ಮೂಳೆಗಳನ್ನು ಕೊಡಲು ಬೇಡಿಕೊಳ್ಳಿ. ಆ ದಧೀಚಿ ಋಷಿಯ ಮೂಳೆಗಳಿಂದ ಮಾಡಿದ ಆಯುಧದಿಂದ ಮಾತ್ರ ವೃತ್ರಾಸುರ ಮರಣ" ಎಂಬುವುದಾಗಿ ತಿಳಿಸಿದನು. ಬ್ರಹ್ಮನ ವಾಕ್ಕು ಕೇಳಿದ ಇಂದ್ರಾದಿ ದೇವತೆಗಳು ಶ್ರೀಮನ್ನಾರಾಯಣನನ್ನು ಮುಂದೆ ಮಾಡಿಕೊಂಡು ದಧೀಚಿ ಮಹರ್ಷಿಯ ಆಶ್ರಮಕ್ಕೆ ಬಂದರು, ಫಲ ಪುಷ್ಪ ಭರಿತವಾದ ಆ ಋಷ್ಯಾಶ್ರಮ ಬಹು ರಮ್ಯವಾದ ವೃಕ್ಷಗಳ ಸಂಕುಲ. ಅಲ್ಲಿ ಝುಂಕಾರಮಾಡುವ ಜೇನುಗಳ ನಿಕರ. ಸುಮಧುರ ನಿನಾದಮಾಡುವ ಕೋಕಿಲ ಚಕೋರಗಳ ಪಕ್ಷಿಸಮೂಹ, ಜಿಂಕೆಗಳು ಆಶ್ರಮದಲ್ಲಿ ಕ್ರೂರಮೃಗಗಳೊಡನೆ ಸ್ವೇಚ್ಛೆಯಿಂದ ತಮ್ಮ ವೈರತ್ವವನ್ನು ಮರೆತು ಸಂಚರಿಸುವ ದೃಶ್ಯವನ್ನು ಕಂಡು ದೇವತೆಗಳು ಮೂಕರಾದರು. ಅಂತಹ ಪವಿತ್ರವಾದ ದಧೀಚಿ ಆಶ್ರಮವನ್ನು ಕಂಡು ಶ್ರೀಮನ್ನಾರಾಯಣನು ಸಂತೋಷಿತನಾದನು. ಅಮಿತ ತೇಜಸ್ವಿಯಾದ ಬ್ರಹ್ಮರ್ಷಿಯಾದ ದಧೀಚಿ ಋಷಿಯ ಪಾದಗಳಿಗೆ ಸಕಲ ದೇವತೆಗಳ ಸಮೂಹ ನಮಸ್ಕಾರ ಮಾಡಿ ಅಭಯ ಪ್ರದಾನ ಮಾಡಿ ಎಂದರು. ಋಷಿ ಒಪ್ಪಿದಾಗ, ದೇವತೆಗಳು "ಮಹರ್ಷಿ! ನಿನಗೆ ತಿಳಿದಂತೆ ವಿಶ್ವರೂಪಾಚಾರ್ಯರನ್ನು ಇಂದ್ರ ಕೊಂದಮೇಲೆ ಬ್ರಹ್ಮಹತ್ಯಾ ದೋಷದಿಂದ ಇಂದ್ರನಿಗೆ ಶಾಂತಿ ಇಲ್ಲದಾಗಿದೆ. ವಿಶ್ವರೂಪನು ದೇವತೆಗಳ ಪುರೋಹಿತನಾಗಿ ರಾಕ್ಷಸರ ಪಕ್ಷಪಾತಿಯಾಗಿದ್ದವ. ಅವರಲ್ಲಿ ಹೆಚ್ಚಿಗೆ ಅಭಿಮಾನವನ್ನು ಪಡೆದಿದ್ದನು. ತಾನು ಮಾಡಿಸುವ ಯಜ್ಞಯಾಗಾದಿಗಳಲ್ಲಿ ರಹಸ್ಯವಾಗಿ ಅಸುರರಿಗೂ ಆಹುತಿಯನ್ನು ಕೊಡುತ್ತಿದ್ದ. ಆ ವಿಶ್ವರೂಪನು ನೀಡಿದ ಈ ಹವಿಸ್ಸಿನಿಂದ ಅಸುರರಿಗೆ ಅಮಿತ ತೇಜಸ್ಸು, ಬಲ ಒದಗಿಬಂದು ಅವರು ಈಗ ಅಭೇದ್ಯರಾಗಿದ್ದಾರೆ. ಈ ಗುಟ್ಟನ್ನು ತಿಳಿದೇ ಇಂದ್ರ ಆಚಾರ್ಯನನ್ನು ಕೊಂದು ಬ್ರಹ್ಮಹತ್ಯಾ ದೋಷಕ್ಕೆ ಪಾತ್ರನಾಗಿದ್ದಾನೆ.

"ವಿಶ್ವರೂಪನ ಮರಣವನ್ನು ಕೇಳಿ ತಿಳಿದ ಅವರ ತಂದೆ ತ್ವಷ್ಟೃಬ್ರಹ್ಮನು ಇಂದ್ರನ ನಾಶಕ್ಕೆ ಯಜ್ಞವನ್ನು ಮಾಡಿಸುತ್ತಿದ್ದನು. ಅದನ್ನು ತಿಳಿದ ಇಂದ್ರನು ಕಶ್ಯಪನನ್ನು ಸಂಧಾನಕ್ಕೆ ತ್ವಷ್ಟೃಬ್ರಹ್ಮನ ಹತ್ತಿರ ಕಳುಹಿಸಿದರೂ ಫಲಕಾರಿಯಾಗಲಿಲ್ಲ. ಶುಕ್ರಾಚಾರ್ಯನ ಮುಖಾಂತರ ಇಂದ್ರನ ನಿರ್ಮೂಲಕ್ಕೆ ಮಾಡುವ ಯಜ್ಞವು ಧರ್ಮ ಸಮ್ಮತವಲ್ಲವೆಂದು ಭಾವಿಸಿದ ಬ್ರಹ್ಮನು ಸರಸ್ವತಿಯನ್ನು ಕುರಿತು ತ್ವಷ್ಟ್ರವಿನ ಸಂಕಲ್ಪವೂ ನೆರವೇರಬೇಕು. ಇಂದ್ರನೂ ಉಳಿಯಬೇಕು.

ಅಂತಹ ಕೃತಿಯನ್ನು ಮಾಡು ಎಂಬುದಾಗಿ ನುಡಿದನು. ಯಾಗವು ಮುಗಿಯಿತು. ಪೂರ್ಣಾಹುತಿಯನ್ನು ಕೊಡುವಾಗ ತ್ವಷ್ಟ ವಿಸ್ಮೃತಿ ಹೊಂದಿ "ಇಂದ್ರ ಶತ್ರೋ ವರ್ಧಸ್ವ" ಇಂದ್ರ ಶತ್ರುವೇ ವರ್ಧಿಸು ಎಂದು ಹೋಮ ಮಾಡಿಸಿದಳು. ಇಂದ್ರನು ಯಾವನಿಗೆ ಶತ್ರುವೋ ಅವನು ಎಂದು ಅಭಿಪ್ರಾಯ ಬರುವಂತೆ ಸ್ವರಭೇದದ ಉಚ್ಚಾರಣೆ ಮಾಡಿಸಿ ಹೋಮ ಪೂರ್ತಿಯಾಯಿತು. ಆ ಯಾಗದಲ್ಲಿ ಜನಿಸಿದ ಕರಾಳ ಪುರುಷನೇ ವೃತ್ರಾಸುರ. ಅವನಿಗೆ ವಿಶ್ವರೂಪಾಚಾರ್ಯರ ಮಾಡಿದ ತಪಸ್ಸು, ಶುಕ್ರಾಚಾರ್ಯರ ತಪಸ್ಸಿನ ಫಲ ದೊರಕಿ ಅಭೇದ್ಯನಾದನು. ತ್ವಷ್ಟ್ರುವಿನ ಆದೇಶದಂತೆ ಇಂದ್ರನನ್ನು ನಿರ್ಮೂಲ ಮಾಡಲು ಹೊರಟಿದ್ದಾನೆ. ಈಗ ಇಂದ್ರನಿಗೆ ನೀನೇ ಗತಿ. ನೀನು ಕೊಟ್ಟ ವರದಂತೆ ನಿನ್ನ ಅಸ್ಥಿಯನ್ನು ಸಶರೀರವಾಗಿ ದಯಪಾಲಿಸದೇ ಕೆಂದು ಬೇಡಿಕೊಂಡರು.

ದಧೀಚಿಯು ಒಂದು ನಿಮಿಷ ಯೋಚಿಸಿದ. ದೇವತೆಗಳಿಗೆ ತನ್ನ ಪ್ರಾಣವಿರುವಾಗಲೇ ಬೆನ್ನು ಮೂಳೆ ಬೇಕು. ಎಲ್ಲರ ಹಿತಕ್ಕಾಗಿ ಈ ದೇಹ ಬೇಕಾದರೆ ಅವರ ಇಚ್ಛೆಯಂತೆ ದೇಹಾಭಿಮಾನ ಬಿಟ್ಟು ಮೂಳೆಯನ್ನು ಕೊಡುವುದೇ ಉತ್ತಮ. ಹುಟ್ಟಿದವನಿಗೆ ಸಾವು ಖಂಡಿತ. ಈ ಮಹಾಕಾರ್ಯಕ್ಕಾಗಿ ನನ್ನ ಜನನ. ಈಶ್ವರನ ಸಂಕಲ್ಪ -- ಎಂದು ಹೇಳುವಾಗ ಮುಗುಳುನಗೆಯಿಂದ--

ತತೋ ದಧೀಚಃ ಪರಮ ಪ್ರತೀತಃ<br>
ಸುರೋತ್ತಮಾಂ ಸ್ತಾನಿದಮಭ್ಯುವಾ ಚ<br>
ಕರೋಮಿ ಯತ್ವೋ ಹಿತಮದ್ಯ ದೇವಾಃ<br>
ಸ್ವಂ ಚಾಪಿ ದೇಹಂ ಸ್ವಯ ಮುತ್ಸೃಜಾಮಿ

ದೇವತೆಗಳಿರಾ ನಿಮ್ಮೆಲ್ಲರ ಹಿತಕ್ಕಾಗಿ ಜಗತ್ತಿನ ಕಲ್ಯಾಣಕ್ಕಾಗಿ ನಿಮ್ಮಗಳ ಶ್ರೇಯಸ್ಸಿಗಾಗಿ ನಾನು ನನ್ನ ದೇಹವನ್ನು ಈಗಲೇ ತ್ಯಜಿಸಲು ಸಿದ್ಧನಾಗಿದ್ದೇನೆ ಎಂಬುವುದಾಗಿ ತಿಳಿಸಿ ತನ್ನ ದೇಹದ ಅಸ್ಥಿಯನ್ನು ನೀಡಿ ಪ್ರಾಣತ್ಯಾಗಮಾಡಿ ಅಕ್ಷಯ ಲೋಕವನ್ನು ಪಡೆದ. ದಧೀಚಿಯ ಮೂಳೆಗಳನ್ನು ಹೊತ್ತು ದೇವತೆಗಳು ದೇವ ಶಿಲ್ಪಿಯ ಸಹಾಯದಿಂದ ವಜ್ರಾಯುಧವನ್ನು ಮಾಡಿದರು. ಅದರಿಂದ ವೃತ್ರಾಸುರನ ಸಂಹಾರವಾಯಿತು. ದೇವತೆಗಳು ನಿರ್ಭಯರಾದರು. ದೇಶ ಸಂತೋಷಭರಿತವಾಯಿತು. ದಧೀಚಿ ದೇಹತ್ಯಾಗ ಮಾಡಿದಾಗ ಆತನ ಪತ್ನೀ ಪ್ರಾತಿಥೇಯಿ ಗರ್ಭವತಿಯಾಗಿದ್ದಳು. ನವಮಾಸ ತುಂಬಿದಾಗ ಆಕೆ ಪ್ರಸಿದ್ಧನಾದ ಪಿಪ್ಪಲಾದನೆಂಬ ಮಗನಿಗೆ ಜನ್ಮವಿತ್ತಳು. ಈ ಪಿಪ್ಪಲಾದ ಋಷಿಯೇ ಮುಂದೆ ಶನಿ ಬಗ್ಗೆ ಅಪಾರವಾದ ಮಾಹಿತಿಯನ್ನು ನೀಡಿದ ಮಹರ್ಷಿಯಾದನು. ಮುಂದೆ ಮಹಾ ಅನಾವೃಷ್ಟಿ ಸಂಭವಿಸಿ ಮಹರ್ಷಿಗಳು ಎಲ್ಲರೂ ದಿಕ್ಕುದಿಕ್ಕುಗಳಿಗೆ ಚದರಿಹೋಗಲು ಸಾರಸ್ವತ ಮಹರ್ಷಿ ಸರಸ್ವತೀ ನದಿ ತೀರದಲ್ಲಿ ಪಿತೃದೇವತೆಗಳಿಗೆ ತರ್ಪಣ ನೀಡುತ್ತಾ ವೇದಗಳನ್ನು ಪಠಿಸುತ್ತಾ ಇದ್ದನು. ಅನಾವೃಷ್ಟಿ ಸಮಯದಲ್ಲಿ ಋಷಿಗಳು ವೇದಗಳ ಅಧ್ಯಯನ ಮಾಡದೆ ಎಲ್ಲವನ್ನೂ ಮರೆತಿದ್ದರು. ಸಾರಸ್ವತ ಋಷಿಯಾದರೋ ನಿರ್ಜನವನದಲ್ಲಿ ಸ್ವಾಧ್ಯಾಯವನ್ನು ಮಾಡುತ್ತಾ ವೇದಮಾತೆಯನ್ನೂ ವೇದಗಳನ್ನೂ ಕಾಪಾಡಿಕೊಂಡು ಬಂದನು. ಅನಾವೃಷ್ಟಿಯ ತರುವಾಯ ಈ ವಿಷಯವನ್ನು ತಿಳಿದ ಋಷಿ ಬ್ರಾಹ್ಮಣರು ಚಿಕ್ಕ ವಯಸ್ಸಿನ ಸಾರಸ್ವತನನ್ನು ಸಮೀಪಿಸಿ ವೇದವನ್ನು ಪುನಃ ಪಡೆದರು. ಧರ್ಮ ನಷ್ಟವಾಗುವ ಸಮಯದಲ್ಲಿ ತನ್ನ ಏಕಾಗ್ರತೆಯಿಂದ ಸ್ವಾಧ್ಯಾಯ ಅಭ್ಯಾಸದಿಂದ ವೇದಗಳನ್ನು ಉಳಿಸಿ ಜಗತ್ತಿಗೆ ನೀಡಿದ ಮಹಾಪುರುಷ ಸಾರಸ್ವತ ಮಹರ್ಷಿಯನ್ನು ಜಗತ್ತಿಗೆ ನೀಡಿದ ತ್ಯಾಗಮಯಿ ಧ್ರುವತಾರೆ, ದಧೀಚಿ ಮಹರ್ಷಿ. ಸುಮಾರು ಅರವತ್ತು ಸಾವಿರ ಋಷಿಗಳು ಸಾರಸ್ವತ ಮುನಿಯಿಂದ ವೇದ ಕಲಿತು ಉಪಕೃತರಾದರು. ಧರ್ಮವು ಬೆಳಗಿತು. ವೇದವು ಉದ್ಧಾರವಾಯಿತು. ದಧೀಚಿ ತ್ಯಾಗದಿಂದ ಅಮೃತತ್ವವನ್ನು ಪಡೆದರು. ದೇವತೆಗಳು ಮುಂದೆಯೂ ಅಮೃತವನ್ನು ಕುಡಿದರೂ ತಾವು ಮಾಡಿದ ತಪ್ಪಿಗೆ ಕಷ್ಟಗಳನ್ನು ಅನುಭವಿಸುವುದು ತಪ್ಪಲಿಲ್ಲ. ದೇವತೆಗಳ ಕಷ್ಟವನ್ನು ನಿವಾರಣೆ ಮಾಡಿದ ದಧೀಚಿ ಮಹರ್ಷಿ ಧನ್ಯನು. ಪ್ರಾತಃಸ್ಮರಣೀಯನು. ಅಂತಹ ದಧೀಚಿ ಮಹರ್ಷಿಯನ್ನು ನಮಿಸುವ. ✣

# TEMPLE TIMINGS AT TIRUMALA

## SATURDAYS, SUNDAYS

| | | |
|---|---|---|
| 3-00 a.m. to 3-30 a.m. | ... | Suprabhatam (only Rs. 50/- Special Entrance ticket holders will be adimitted). |
| 3-30 a.m. to 3-45 a.m. | ... | Suddhi etc. |
| 3-45 a.m. to 4-30 a.m. | ... | Thomala Seva (Arjitham Rs. 100/- per head). |
| 4-30 a.m. to 4-45 a.m. | ... | Koluvu and Panchanga Sravanam. |
| 4-45 a.m. to 5-30 a.m. | ... | 1st Archana i.e., Sahasranama Archana (Arjitha Rs. 100/- per head). |
| 5-30 a.m. to 6-00 a.m. | ... | 1st Bell, Bali and Sattumora. |
| 6-00 a.m. to 11-00 a.m. | ... | **Sarvadarsanam** |
| 11-00 a.m. to 12-00 noon | ... | Suddhi, Second Archana (Ekantam) and Second Bell etc. |
| 12-00 noon to 7-00 p.m. | ... | **Sarvadarsanam** |
| 1-00 p.m. to 5-00 p.m. | ... | Arjitha Kalyanotsavam, Brahmotsavam, Vahana Sevas, Unjal Sevas etc. |
| 7-00 p.m. to 8-00 p.m. | ... | Suddhi, Night Kainkaryams (Ekantam) and Night Bell. |
| 8-00 p.m. to 10-00 p.m. | ... | **Sarvadarsanam** |
| 10-00 p.m. to 10-30 p.m. | ... | Suddhi, preparations for Ekanta Seva. |
| 10-30 p.m. | ... | Ekanta Seva (Arjitham Rs. 50/- per head). |

*Note:* Sarvadarsanam will be continued beyond 10-00 p.m. subject to rush.

## MONDAYS

**Special Seva--Visesha Puja 6-00 a.m. to 8-00 a.m.**

| | | |
|---|---|---|
| 3-00 a.m. to 3-30 a.m. | ... | Suprabhatam (only Rs. 50/- Special Entrance ticket holders will be adimitted). |
| 3-30 a.m. to 3-45 a.m. | ... | Suddhi etc. |
| 3-45 a.m. to 4-30 a.m. | ... | Thomala Seva (Arjitham Rs. 100/- per head). |
| 4-30 a.m. to 4-45 a.m. | ... | Koluvu and Panchanga Sravanam. |
| 4-45 a.m. to 5-30 a.m. | ... | 1st Archana i.e., Sahasranama Archana (Arjitha Rs. 100/- per head). |
| 5-30 a.m. to 6-00 a.m. | ... | 1st Bell, Bali and Sattumora. |
| 6-00 a.m. to 11-00 a.m. | ... | **Sarvadarsanam** |
| 11-00 a.m. to 12-00 noon | ... | Suddhi, Second Archana (Ekantam) and Second Bell etc. |
| 12-00 noon to 7-00 p.m. | ... | **Sarvadarsanam** |
| 1-00 p.m. to 5-00 p.m. | ... | Arjitha Kalyanotsavam, Brahmotsavam, Vahana Sevas, Unjal Sevas etc. |
| 7-00 p.m. to 8-00 p.m. | ... | Suddhi, Night Kainkaryams (Ekantam) and Night Bell. |
| 8-00 p.m. to 10-00 p.m. | ... | **Sarvadarsanam** |
| 10-00 p.m. to 10-30 p.m. | ... | Suddhi, preparations for Ekanta Seva. |
| 10-30 p.m. | ... | Ekanta Seva (Arjitham Rs. 50/- per head). |

*Note:* Sarvadarsanam will be continued beyond 10-00 p.m. subject to rush.

## TUESDAYS

**(Special Seva : Ashtadala Pada Padmaradhana)**

| | | |
|---|---|---|
| 3-00 a.m. to 3-30 a.m. | ... | Suprabhatam (only Rs. 50/- Special Entrance ticket holders will be adimitted). |
| 3-30 a.m. to 3-45 a.m. | ... | Suddhi etc. |
| 3-45 a.m. to 4-30 a.m. | ... | Thomala Seva (Arjitham Rs. 100/- per head). |
| 4-30 a.m. to 4-45 a.m. | ... | Koluvu and Panchanga Sravanam inside Bangaru Vakili. |
| 4-45 a.m. to 5-30 a.m. | ... | 1st Archana i.e., Sahasranama Archana (Arjitha Rs. 100/- per head). |
| 5-30 a.m. to 6-00 a.m. | ... | 1st Bell, Bali and Sattumora. |
| 6-00 a.m. to 11-00 a.m. | ... | **Sarvadarsanam** |
| 11-00 a.m. to 11-15 a.m. | ... | Ashtadala Pada Padmaradhana Seva (2nd Archana with Golden Lotus Flowers). |
| 11-45 a.m. to 12-00 noon | ... | II Bell. |
| 12-00 noon to 7-00 p.m. | ... | **Sarvadarsanam** |
| 1-00 p.m. to 5-00 p.m. | ... | Arjitha Kalyanotsavam, Brahmotsavam, Vahana Sevas, Unjal Sevas etc. |
| 7-00 p.m. to 8-00 p.m. | ... | Suddhi, Night Kainkaryams (Ekantam) and Night Bell. |
| 8-00 p.m. to 10-00 p.m. | ... | **Sarvadarsanam** |
| 10-00 p.m. to 10-30 p.m. | ... | Suddhi, preparations for Ekanta Seva. |
| 10-30 p.m. | ... | Ekanta Seva (Rs. 50/- ticket holders are admitted). |

*Note:* Sarvadarsanam will be continued beyond 10-00 p.m. subject to rush.

# SAPTHAGIRI 1995-96

**APRIL - 95**

| SUN | MON | TUE | WED | THU | FRI | SAT |
|---|---|---|---|---|---|---|
| 30 | ✠ | ✠ | ✠ | ✠ | ✠ | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

**MAY - 95**

| SUN | MON | TUE | WED | THU | FRI | SAT |
|---|---|---|---|---|---|---|
| ✠ | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | ✠ | ✠ | ✠ |

**JUNE - 95**

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | ✠ | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | ✠ |

**JULY - 95**

| SUN | MON | TUE | WED | THU | FRI | SAT |
|---|---|---|---|---|---|---|
| 30 | 31 | ✠ | ✠ | ✠ | ✠ | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

**AUGUST - 95**

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | ✠ | ✠ |

**SEPTEMBER - 95**

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | ✠ | ✠ | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

**OCTOBER - 95**

| SUN | MON | TUE | WED | THU | FRI | SAT |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | ✠ | ✠ | ✠ | ✠ |

**NOVEMBER - 95**

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | ✠ | ✠ |

**DECEMBER - 95**

| SUN | MON | TUE | WED | THU | FRI | SAT |
|---|---|---|---|---|---|---|
| 31 | ✠ | ✠ | ✠ | ✠ | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

**JANUARY-96**

| SUN | MON | TUE | WED | THU | FRI | SAT |
|---|---|---|---|---|---|---|
| ✠ | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | ✠ | ✠ | ✠ |

**FEBRUARY-96**

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | ✠ | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | ✠ | ✠ |

**MARCH-96**

| SUN | MON | TUE | WED | THU | FRI | SAT |
|---|---|---|---|---|---|---|
| 31 | ✠ | ✠ | ✠ | ✠ | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

# SAPTHAGIRI 1995-96

## APRIL - 95

| SUN | MON | TUE | WED | THU | FRI | SAT |
|---|---|---|---|---|---|---|
| 30 | ✠ | ✠ | ✠ | ✠ | ✠ | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## MAY - 95

| SUN | MON | TUE | WED | THU | FRI | SAT |
|---|---|---|---|---|---|---|
| ✠ | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | ✠ | ✠ | ✠ |

## JUNE - 95

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | ✠ | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | ✠ |

## JULY - 95

| SUN | MON | TUE | WED | THU | FRI | SAT |
|---|---|---|---|---|---|---|
| 30 | 31 | ✠ | ✠ | ✠ | ✠ | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## AUGUST - 95

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | ✠ | ✠ |

## SEPTEMBER - 95

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | ✠ | ✠ | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## OCTOBER - 95

| SUN | MON | TUE | WED | THU | FRI | SAT |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | ✠ | ✠ | ✠ | ✠ |

## NOVEMBER - 95

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | ✠ | ✠ |

## DECEMBER - 95

| SUN | MON | TUE | WED | THU | FRI | SAT |
|---|---|---|---|---|---|---|
| 31 | ✠ | ✠ | ✠ | ✠ | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## JANUARY-96

| SUN | MON | TUE | WED | THU | FRI | SAT |
|---|---|---|---|---|---|---|
| ✠ | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | ✠ | ✠ | ✠ |

## FEBRUARY-96

| SUN | MON | TUE | WED | THU | FRI | SAT |
|---|---|---|---|---|---|---|
| ✠ | ✠ | ✠ | ✠ | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | ✠ | ✠ |

## MARCH-96

| SUN | MON | TUE | WED | THU | FRI | SAT |
|---|---|---|---|---|---|---|
| 31 | ✠ | ✠ | ✠ | ✠ | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

# ಉಪನಿಷತ್ತುಗಳ ಸಂದೇಶ

---ಎಚ್. ವಿ. ನರಸಿಂಹ ಮೂರ್ತಿ.

ವೇದ ವಾಙ್ಮಯದ ಉತ್ತುಂಗಶಿಖರವೆನಿಸಿರುವ ಉಪನಿಷತ್ತುಗಳು ವೇದಗಳ ಅಂತಿಯ ಭಾಗವೂ ಆಗಿ ವೇದಾಂತವೆನಿಸಿವೆ. ಈ ಉಪನಿಷತ್ತುಗಳು ಭಾರತೀಯ ತತ್ವಜ್ಞಾನ ಹಾಗೂ ಧರ್ಮಸಿದ್ಧಾಂತಗಳ ಮೂಲಗಳಾಗಿವೆ. ವೈದಿಕಧರ್ಮವನ್ನು ಪ್ರತಿಪಾದಿಸುವ ಪ್ರಸ್ಥಾನತ್ರಯದಲ್ಲಿ ಮುಖ್ಯವೆನಿಸಿ, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳಿಗೂ ಆಶ್ರಯ ಸ್ಥಾನವಾಗಿವೆ. ಪವಿತ್ರ ಭಾರತದಲ್ಲಿ ಉದಿಸಿದ ಎಲ್ಲ ದರ್ಶನಗಳಿಗೂ ಉಪನಿಷತ್ತುಗಳು ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ ಆಧಾರಗಳಾಗಿವೆ. ಭಾರತೀಯ ಸಂಸ್ಕೃತಿಯ ಪ್ರಕಾಶಸ್ತಂಭಗಳಾದ ಈ ಉಪನಿಷತ್ತುಗಳು ತತ್ವದೃಷ್ಟಿಯಿಂದ ಹೇಗೋ ಹಾಗೆಯೇ ಸಾಹಿತ್ಯದೃಷ್ಟಿಯಿಂದಲೂ ತುಂಬಿ ಸುಂದರವಾಗಿವೆ.

ಈ ಉಪನಿಷತ್ತುಗಳು ಪ್ರತಿಪಾದಿಸುವ ತತ್ವದರ್ಶನ ಮಾನವ ಕೋಟಿಯು ಮುಟ್ಟಬಹುದಾದ ಅತ್ಯುನ್ನತ ಮಟ್ಟವನ್ನು ಪ್ರತಿಬಿಂಬಿಸುತ್ತವೆ. ಅನೇಕ ದೇವತೋಪಾಸನೆಯಿಂದ ಏಕದೇವತೋಪಾಸನೆಯ ಕಡೆಗೆ ಈ ವಿಚಾರ ಮಾರ್ಗ ಸಾಗಿರುವುದನ್ನು ಕಾಣಬಹುದು. ಪುರುಷ ಹಾಗೂ ಪ್ರಕೃತಿಗಳಿಗಿಂತ ವಿಲಕ್ಷಣವಾದ ಪರಮಾತ್ಮ ತತ್ವವನ್ನು ಈ ಉಪನಿಷತ್ತುಗಳು ಬಹು ಯಶಸ್ವಿಯಾಗಿ ಪ್ರತಿಪಾದಿಸುತ್ತವೆ. ಆ ಭಗವತ್ತತ್ವವನ್ನು ಬ್ರಹ್ಮವೆಂದೂ, ಆತ್ಮವೆಂದೂ, ಸತ್ಯವೆಂದೂ ಇವು ಕರೆಯುತ್ತವೆ. ವೇದ ಋಷಿಗಳು ವಿಶ್ವರಹಸ್ಯವನ್ನು ವಿವರಿಸುತ್ತಾ ಈ ಬ್ರಹ್ಮತತ್ವ ಜಗತ್ತಿಗೆ ಸರ್ವಕಾರಣವಾಗಿ, ಏಕಮೇವಾದ್ವಿತೀಯವಾಗಿ ಜಗತ್ತಿನಲ್ಲಿ ಓತಪ್ರೋತವಾಗಿದೆಯೆಂದು ಸಾರಿದ್ದಾರೆ. ಹೆಸರಾಂತ ಪಾಶ್ಚಾತ್ಯ ದಾರ್ಶನಿಕ ಶೋಪನ್‌ಹಾರ್ ಈ ಉಪನಿಷತ್ತುಗಳನ್ನು ಕುರಿತು 'the fruit of human knowledge and wisdom'-- ಎಂದರೆ ಡೈಸನ್ 'the most intimate and immediate light upon the last secret of existence' -- ಎಂದು ಪ್ರಶಂಸಿಸಿದ್ದಾನೆ.

ಉಪನಿಷತ್ತಿನ ಗಹನ ತತ್ವಗಳು ಅನುಷ್ಠಾನ ಪ್ರಧಾನವಾದುವು. ಅವು ಮೊದಲು ಅನುಷ್ಠಾನವಾಗಿ ಅನಂತರ ಒಂದು ಸಿದ್ಧಾಂತವಾದುವು. ಅನೇಕ ವೇಳೆ ನಾವು 'ವೇದಾಂತವನ್ನು ಅನುಷ್ಠಾನಕ್ಕೆ ತರುವುದು ಅಸಾಧ್ಯ. ಇದು ಪ್ರಪಂಚದ ಹವ್ಯಾಸವಿಲ್ಲದವರಿಗೇ ಸರಿ; ಜಗದ ಗಡಿಬಿಡಿಯಲ್ಲಿರುವವರಿಗೆ ಇವೆಲ್ಲ ಸಾಧ್ಯವೇ ಇಲ್ಲ' -- ಎಂದೆಲ್ಲ ಹೇಳುವುದುಂಟು. ಆದರೆ ಉಪನಿಷತ್ತು ಮೊದಲಿಗೆ ಹುಟ್ಟಿದ್ದೇ ಸಂಸಾರದ ಸುಳಿಯಲ್ಲಿ ಎಲ್ಲರಿಗಿಂತ ಹೆಚ್ಚು ಸಿಕ್ಕಿದ ಕ್ಷತ್ರಿಯರಾಜರಿಂದ. ಛಾಂದೋಗ್ಯ ಉಪನಿಷತ್ತಿನ ಪಾಂಚಾಲ ರಾಜ, ಶ್ವೇತಕೇತುವೆಂಬ ಸಾಧಕನಿಗೆ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾನೆ. ಆಗಿನ ಕಾಲದಲ್ಲಿ ರಾಜ ನಿರಂಕುಶ ಪ್ರಭು. ರಾಜ್ಯವನ್ನು ಆಳುವುದರ ಜತೆಗೆ ನ್ಯಾಯಾನ್ಯಾಯಗಳನ್ನು ವಿಚಾರಿಸಬೇಕಾಗಿತ್ತು. ಯುದ್ಧರಂಗದಲ್ಲಿ ಸೈನ್ಯದ ಮೇಲ್ವಿಚಾರಣೆಯನ್ನೂ ನಡೆಸಬೇಕಾಗಿತ್ತು. ಇಂತಹ ರಾಜರಿಗೆ ಉಪನಿಷತ್ತಿನಲ್ಲಿ ಬರುವ ಸತ್ಯವನ್ನು ಚಿಂತಿಸಲು ಅವಕಾಶವಿತ್ತು. ಅದನ್ನು ಅನುದಿನ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಿತ್ತು -- ಎಂದು ನೋಡುವೆವು. ಅಂತಹ ರಾಜರ ಜೀವನದೊಂದಿಗೆ ಹೋಲಿಸಿ ನೋಡಿದರೆ ನಮ್ಮದು ವಿರಾಮ ಜೀವನ. ಯಾವುದು ಅವರಿಗೆ ಸಾಧ್ಯವಾಯಿತೋ ಅದು ನಮಗೆ ಸಾಧ್ಯವಾಗಬೇಕು. ಅಸಾಧ್ಯವನ್ನು ಉಪನಿಷತ್ತು ಬೋಧಿಸುವುದಿಲ್ಲ. ಜಗತ್ತಿನ ಜಂಜಾಟವನ್ನು ಬಿಟ್ಟವರಿಗೆ ಮೀಸಲ[illegible] ವೇದಾಂತ. ನಿತ್ಯ ಜೀವನದಲ್ಲಿ ಆಚರಿಸಬಹುದ[illegible] 'ಅನುಷ್ಠಾನವೇದಾಂತ' ಉಪನಿಷತ್ತಿನದು.

ಮಾನವಜೀವನವನ್ನು ನಿಕೃಷ್ಟವಾಗಿ ಕಾಣುವುದಿಲ್ಲ, ಉಪನಿಷತ್ತು. ಎಲ್ಲಿಯೂ ಅದು ಮನುಷ್ಯನನ್ನು ದೂರುವುದಿಲ್ಲ. ಮಾನವ ಎಂದರೆ ಸೃಷ್ಟಿಯ ವಿಕಾಸದ ಏಣಿಯಲ್ಲಿ ತುತ್ತತುದಿಯಲ್ಲಿ ಇರುವವನು. 'ಶೃಣ್ವಂತು ಸರ್ವೇ ಅಮೃತಸ್ಯ ಪುತ್ರಾಃ' ಎಂದು ಶ್ವೇತಾಶ್ವತರ ಉಪನಿಷತ್ತು ಮಾನವನನ್ನು ಸಂಬೋಧಿಸುವುದು. ಮಾನವರನ್ನು ಪಾಪಿಗಳೆಂದು ಕರೆಯುವುದೇ ಈಶ್ವರನಿಂದೆ. ನಾವು ಬ್ರಹ್ಮದಿಂದ ಬಂದವರು; ಅದರೆಡೆಗೆ ಹೊರಟವರು. ಸದ್ಯಕ್ಕೆ ಇರುವಾಗಲೂ ಅದರಲ್ಲೇ ಇರುವೆವು. ಆದರೆ ಈ ವಾಸ್ತವವನ್ನು ಸದ್ಯದ ಸ್ಥಿತಿಯಲ್ಲಿ ಮರೆತಿರುವೆವು. ಆ ಸ್ಥಿತಿಯನ್ನು ನಾವು ಸಾಧನೆಯಿಂದ ಜ್ಞಾಪಿಸಿಕೊಳ್ಳಬೇಕಾಗಿದೆ. ಆ ಶಿಷ್ಠ -- ದೃಢಿಷ್ಠ -- ಬಲಿಷ್ಠರಾಗಬೇಕೆಂದು ಉಪನಿಷತ್ತು ಹೇಳುವುದು. ಅಂತೂ ಹೇಗೋ ಕಾಲಯಾಪನೆ ಮಾಡುವುದಲ್ಲ. ಧೀರರಾಗಿ ಬಾಳಬೇಕು; ಜೀವನವನ್ನು ಒಂದು ವರದಂತೆ ಸ್ವೀಕರಿಸಬೇಕು. ಇದೊಂದು ಶಾಪ -- ಎಂದು ಗೋಳಿಟ್ಟು ಒರಲುವ ಅಳುಮೋರೆಯ ಧರ್ಮವನ್ನು ಉಪನಿಷತ್ತು ಬೋಧಿಸುವುದಿಲ್ಲ.

ಪ್ರಪಂಚವನ್ನು ಅನುಭವಿಸಬೇಡಿ -- ಎನ್ನುವುದಿಲ್ಲ ಉಪನಿಷತ್ತು. ಅನುಭವಿಸುವ ರಹಸ್ಯವನ್ನು ತಿಳಿದುಕೊಂಡು ಅನುಭವಿಸಿ -- ಎನ್ನುವುದು. ನಮಗೆಲ್ಲ ಅನುಭವಿಸಲು ಆಸೆ. ರೂಪ -- ರಸ -- ಶಬ್ದ -- ಗಂಧಗಳು ನಮ್ಮನ್ನು ಕರೆಯುತ್ತಿವೆ. ರಹಸ್ಯವನ್ನು ಕಲಿಯುವ ತಾಳ್ಮೆ ಇಲ್ಲ. ತಕ್ಷಣ ಅದರ ಕಡೆಗೆ ಗಮನ ಕೊಟ್ಟು ಬೀಳುವೆವು.ಈಜು ಬಾರದವನು ನೀರಿಗೆ ಬಿದ್ದಂತೆ ಆಗುವುದು. ನೊಣ ಹಲಸಿನ ಹಣ್ಣನ್ನು ತಿನ್ನಲು ಹೋಗಿ ಅಂಟಿನ ಮೇಲೆ ಕುಳಿತಂತೆ ಆಗುವುದು. ಅನಂತರ ದುಃಖ ಪಡುವೆವು. ಈ ಪ್ರಪಂಚದಲ್ಲಿ ಏನಿದೆಯೊ ಅದನ್ನೆಲ್ಲ ಭಗವಂತನಿಂದ ತುಂಬಿ -- ಎಂದು ಈಶಾವಾಸ್ಯ ಉಪನಿಷತ್ತು ಹೇಳುವುದು. ದೇವರನ್ನು ಜ್ಞಾಪಕದಲ್ಲಿಟ್ಟುಕೊಂಡು ಇದೆಲ್ಲ ಅವನದೆಂಬ ಭಾವನೆಯಿಂದ ಪ್ರಪಂಚವನ್ನು ಆಸ್ವಾದಿಸುವ. ಆಗ ದುಃಖ -- ದುರಂತಗಳಿಗೆ ಕಾರಣವಾದವು ನಮ್ಮ ಜೀವನವನ್ನು ಪ್ರವೇಶಿಸುವುದಿಲ್ಲ; ಎಂದು ಈಶನನ್ನು ಮರೆಯುವೆಯೋ ಅಂದು ಅಮೃತವು ವಿಷವಾಗುವುದು. ಎಂದು ಮರೆಯುವುದಿಲ್ಲವೋ ಅಂದು ವಿಷವು ಅಮೃತವಾಗುವುದು. ಜೀವನದಲ್ಲಿ ಬಾಳುವುದೊಂದು ದೊಡ್ಡಕಲೆ. ನಾವು ಶಾಂತಿಯನ್ನು ಅನುಭವಿಸಿ, ಸುತ್ತಲೂ ಇರುವವರಿಗೆ ಶಾಂತಿ ನೀಡುವುದೇ ಜೀವನದ ಮುಖ್ಯ ಉದ್ದೇಶ. ಇದಕ್ಕೆ ನಾವು ಅಣಿಯಾಗಬೇಕು; ತರಬೇತು ತೆಗೆದುಕೊಳ್ಳಬೇಕು. ಸುಮ್ಮಗೆ ಆತುರದಿಂದ ಧಾವಿಸಿದರೆ ಇಲ್ಲದ ಕಷ್ಟ ನಷ್ಟಗಳಿಗೆ ಒಳಗಾಗುವೆವು. ಜೀವನವನ್ನು ಅನಂತರ ಹಳಿಯುವೆವು.

ಈಶಾವಾಸ್ಯ ಉಪನಿಷತ್ತು ಬೋಧಿಸುವ ಮತ್ತೊಂದು ಅಮರ ಸತ್ಯ 'ತ್ಯಾಗದಿಂದ ಅನುಭವಿಸು' ಎಂಬುದು. ಸಂಗ್ರಹಿಸುವುದರಲ್ಲಿ ಆನಂದವಿದೆ. ಅದನ್ನು ಮತ್ತೊಬ್ಬರಿಗೆ ನೀಡುವುದರಲ್ಲಿ ಅದಕ್ಕಿಂತ ಮಿಗಿಲಾದ ಆನಂದವಿದೆ. ಈಶನು ನಮಗೆ ಏನನ್ನು ಕೊಟ್ಟಿರುವನೊ ಅದನ್ನು ಅವನ ಮಕ್ಕಳಿಗೆ ಕೊಟ್ಟು ಅನುಭವಿಸಬೇಕು. ನಾವು ಏನನ್ನು ಕೊಡುವೆವೊ ಅದು ನಮ್ಮ ಉದ್ಧಾರಕ್ಕೆ ಕಾದು ನಿಂತಿರುವುದು. ನಾವು ಕೊಟ್ಟದ್ದು ಹತ್ತಾಗಿ, ನೂರಾಗಿ, ಸಾವಿರವಾಗಿ ನಮ್ಮೆಡೆಗೆ ಬರುವುದು. ಸಂಗ್ರಹದಿಂದ ಬಂದ ಆನಂದ ಕ್ಷೀಣವಾಗುವುದು. ಎಂದು ನಾವು ಅದನ್ನು ಇತರರಿಗೆ ಕೊಡುವವೊ ಅದು ವೃದ್ಧಿಯಾಗುವುದು.

## ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ದೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಆಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.

* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ಇರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

'ಈ ಪ್ರಪಂಚದಲ್ಲಿ ಶಾಸ್ತ್ರವಿಹಿತವಾದ ಕರ್ಮಗಳನ್ನು ಮಾಡುತ್ತ ನೂರು ವರ್ಷ ಜೀವಿಸಲು ಇಚ್ಛೆ ಪಡಬೇಕು' -- ಎನ್ನುತ್ತದೆ, ಉಪನಿಷತ್ತು. ಏಕಾದರೂ ಪ್ರಪಂಚಕ್ಕೆ ಬಂದೆನೊ, ಎಷ್ಟು ಬೇಗ ಇಲ್ಲಿಂದ ಹೋದರೆ ಅಷ್ಟು ಮೇಲು -- ಎಂಬ ಹೇಡಿಯ ಸೂತ್ರವನ್ನಲ್ಲ, ಉಪನಿಷತ್ತು ಬೋಧಿಸುವುದು. ನಾವು ಪ್ರಪಂಚಕ್ಕೆ ಬಂದಮೇಲೆ ಪೂರ್ಣ ಆಯುಷ್ಯವನ್ನು ಬಾಳಬೇಕು; ಓಡಿಹೋಗುವುದಲ್ಲ. ಬಾಳುತ್ತಿರುವಾಗ ಜೀವನ ಧಾರ್ಮಿಕ ಕರ್ಮಗಳಿಂದ ತುಂಬಿ ತುಳುಕಾಡುತ್ತಿರಬೇಕು. ಜೀವನ ಸ್ವಾರ್ಥವಾಗಿ ಬಾಳುವುದಲ್ಲ. ದೇವರ ಪೀಠದ ಬಳಿ ಉರಿಯುತ್ತಿರುವ ಗಂಧದ ಕಡ್ಡಿ ಕ್ಷಣ--ಕ್ಷಣಕ್ಕೂ ತನ್ನನ್ನೇ ಸುಟ್ಟುಕೊಂಡು ಬೂದಿಯಾಗುತ್ತಿದ್ದರೂ, ತಕ್ಕ ಸುವಾಸನೆಯಿಂದ ವಾತಾವರಣವನ್ನೆಲ್ಲ ತುಂಬುವಂತೆ ಪ್ರೀತಿ ಮತ್ತು ಸೇವೆಯ ಪರಿಮಳದಿಂದ ತುಂಬಿ ಬಾಳು ಮಾಯವಾಗಬೇಕು -- ಎಂದು ಉಪದೇಶಿಸುತ್ತದೆ, ಉಪನಿಷತ್ತು.

ಮುಕ್ತಿ ಎಂಬುದು ಬ್ರಾಹ್ಮೀಸ್ಥಿತಿ. ನಾವಿರುವಾಗ ಅದನ್ನು ಅನುಭವಿಸಬೇಕು. ಈಗಲ್ಲದೆ ಕಾಲವಾದ ಮೇಲೆ ಏನೋ ಎಲ್ಲೋ ಸಿಕ್ಕಬಹುದಾದ ಲೋಕವನ್ನೋ, ಸ್ಥಿತಿಯನ್ನೊ ಉಪನಿಷತ್ತು ಹೇಳುವುದಿಲ್ಲ. ಈಗ ಇಲ್ಲದುದು ಅನಂತರ ಬರಲಾರದು; ಈಗ ಅದು ಇದ್ದರೆ. ಅದು ಸತ್ಯ; ಇಲ್ಲದೆ ಇದ್ದರೆ ಅದನ್ನು ಸ್ವೀಕರಿಸಬೇಕಾಗಿಲ್ಲ. ಅಂತೆ -- ಕಂತೆಯ ಪುರಾಣದ ಮೇಲೆ ನಿಂತಿಲ್ಲ; ವರ್ತಮಾನದ ಅನುಭವದ ಆಧಾರದ ಮೇಲೆ ನಿಂತಿದೆ, ಉಪನಿಷತ್ತು. ಕೇನ ಉಪನಿಷತ್ತು 'ಇಲ್ಲಿಯೇ ಅರಿತುಕೊಂಡರೆ ಸತ್ಯ ಉಂಟು; ಇಲ್ಲಿ ಅರಿತುಕೊಳ್ಳದಿದ್ದರೆ ದೊಡ್ಡ ವಿನಾಶವಾಗುತ್ತದೆ. ವಿವೇಕಿಗಳು ಸರ್ವಪ್ರಾಣಿಗಳಲ್ಲಿಯೂ ಅಮೃತತತ್ತ್ವವನ್ನು ಅರಿತುಕೊಂಡು ಈ ಲೋಕದಿಂದ ಹೋಗಿ ಅಮೃತರಾಗುತ್ತಾರೆ. ಯಾವಾಗ ಬ್ರಹ್ಮಪ್ರತಿಬೋಧದಲ್ಲಿಯೂ ತಿಳಿಯಲ್ಪಡುವುದೋ ಆಗ ತಿಳಿದಂತಾಗುವುದು ಎಂದು ಬೋಧಿಸುತ್ತದೆ.

ಅಧ್ಯಯನವನ್ನು ಮುಗಿಸಿಕೊಂಡು ಹೋಗುವ ವೇಳೆ ಬ್ರಹ್ಮಚಾರಿಗಳು ಗುರು ಮಾಡುವ ಬೋಧನೆ ಇಂದಿಗೂ ಅನುಕರಣೀಯವಾಗಿದೆ. ತೈತ್ತಿರೀಯ ಉಪನಿಷತ್ತಿನಲ್ಲಿ, ಇಂದಿನ ಪದವಿದಾನ ಸಮಾರಂಭದಲ್ಲಿ ವಿದ್ಯಾರ್ಥಿಗಳಿಗೆ ನೀಡುವ ಉಪದೇಶದಂತೆ ಬರುವ ಈ ಭಾಗ ತುಂಬ ಅರ್ಥಪೂರ್ಣವಾದುದು. 'ಸತ್ಯವನ್ನು ಹೇಳು; ಧರ್ಮವನ್ನು ಆಚರಿಸು; ಅಧ್ಯಯನದಲ್ಲಿ ಪ್ರಮಾದ ಮಾಡಬೇಡ. ಆಚಾರ್ಯನಿಗೆ ಇಷ್ಟವಾದ ಧನವನ್ನು ತಂದುಕೊಡು. ಸಂಪತ್ತಿಯನ್ನು ವಿಚ್ಛಿನ್ನಗೊಳಿಸದಿರು. ಸತ್ಯದಿಂದ ಕದಲಕೂಡದು. ಧರ್ಮದಿಂದ ಕದಲಕೂಡದು. ಸ್ವಾಧ್ಯಾಯ -- ಪ್ರವಚನಗಳಿಂದ ಕದಲಕೂಡದು. ದೇವ -- ಪಿತೃಕಾರ್ಯದಿಂದ ಕದಲಕೂಡದು. ತಾಯಿಯೇ ನಿನಗೆ ದೇವರಾಗಲಿ; ತಂದೆಯೇ ನಿನಗೆ ದೇವರಾಗಲಿ; ಅತಿಥಿಯೇ ನಿನಗೆ ದೇವರಾಗಲಿ, ಯಾವ ಕರ್ಮಗಳು ಅನಿಂದಿತವೊ ಅವುಗಳನ್ನು ಸೇವಿಸಬೇಕು. ಉಳಿದವುಗಳನ್ನು ಸೇವಿಸಕೂಡದು. ನಮ್ಮಲ್ಲಿ ಯಾವ ಒಳ್ಳೆ ನಡತೆಗಳಿವೆಯೊ, ಅವನ್ನೇ ಸೇವಿಸಬೇಕು. ಶ್ರದ್ಧೆಯಿಂದ ಕೊಡಬೇಕು; ಅಶ್ರದ್ಧೆಯಿಂದ ಕೊಡಬಾರದು. ತನ್ನ ಐಶ್ವರ್ಯದಲ್ಲಿ ತಕ್ಕಂತೆ ಕೊಡಬೇಕು. ವಿನಯದಿಂದ ಕೊಡಬೇಕು; ಮಿತ್ರಭಾವದಿಂದ ಕೊಡಬೇಕು............. ಇದು ವಿಧಿ; ಇದು ಉಪದೇಶ; ಇದು ವೇದರಹಸ್ಯ; ಇದು ಈಶ್ವರಾಜ್ಞೆ. ಹೀಗೆ ಉಪಾಸಿಸಬೇಕು; ಇದು ಅನುಷ್ಠೇಯ'.

ಇಲ್ಲಿ 'ಅಧ್ಯಯನ -- ಪ್ರವಚನಗಳನ್ನು ಬಿಡಕೂಡದು; ಇದೇ ತಪಸ್ಸು' -- ಎಂದು ಸಾರಲಾಗಿದೆ. ಜ್ಞಾನಪ್ರವಾಹವು ವೃದ್ಧಿಯಾಗುತ್ತಿರಬೇಕಾದರೆ, ಅಖಂಡವಾಗಿ ಹರಿದುಹೋಗುತ್ತಿರಬೇಕಾದರೆ, ಇವೆರಡೂ ಅವಶ್ಯಕ. ನಾವು ಅಧ್ಯಯನ ಮಾಡಬೇಕು; ವಿಷಯಗಳನ್ನು ತಿಳಿದುಕೊಳ್ಳಬೇಕು; ಇದಕ್ಕೆ ಒಂದು ಮಿತಿ ಇಲ್ಲ. ಶ್ರೀರಾಮಕೃಷ್ಣರು ನಾನು ಎಲ್ಲಿಯವರೆಗೆ ಇರುವೆನೊ, ಅಲ್ಲಿಯವರೆಗೆ ಕಲಿಯುವೆನು -- ಎಂದು ಹೇಳುತ್ತಿದ್ದರು. ಅಂತೆಯೆ 'ನಾವು ವಿದ್ಯಾಭ್ಯಾಸವನ್ನು ಪೂರೈಸಿದಮೇಲೂ ಋಷಿ ಋಣವನ್ನು ತೀರಿಸಬೇಕಾದರೆ ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಆಳವಾಗಿ ತಿಳಿಯಲು ಪ್ರಯತ್ನಿಸಬೇಕು. ಹೀಗೆ ತಿಳಿದುಕೊಳ್ಳುವಂತೆಯೇ ಅದನ್ನು ಇತರರಿಗೆ ವಿವರಿಸಬೇಕು. ಪಡೆಯುವುದು ಕೊಡುವುದಕ್ಕಾಗಿ. ಹಾಗೆ ಕೊಡುವಾಗ ಕೀರ್ತಿ -- ಯಶಸ್ಸಿನ ಆಸೆಯನ್ನು ಬದಿಗೊತ್ತಿ, 'ನಾನೊಂದು ಮಧ್ಯವರ್ತಿ, ಇನ್ನೊಂದು ಹೃದಯಕ್ಕೆ ಜ್ಞಾನಪ್ರವೇಶಿಸುವುದಕ್ಕೆ' -- ಎಂಬ ದೈನ್ಯಭಾವ ಇರಬೇಕು.

ಬೃಹದಾರಣ್ಯಕ ಉಪನಿಷತ್ತು 'ದತ್ತ, ದಾಮ್ಯತ, ದಯಧ್ವಂ' -- ದಾನಮಾಡಿ; ಇಂದ್ರಿಯನಿಗ್ರಹ ಮಾಡಿ; ದಯೆ ತೋರಿ -- ಎಂದು ಮೂರು ದಕಾರಗಳಿಂದ ನಮ್ಮ ಕರ್ತವ್ಯವನ್ನೆಲ್ಲ ಅತ್ಯಂತ ಪ್ರಭಾವಶಾಲಿಯಾಗಿ ಹೇಳಿದೆ. ಛಾಂದೋಗ್ಯ ಉಪನಿಷತ್ತು 'ಅಥ ಯತ್ತಪೋ ದಾನಂ ಆರ್ಜವಂ' ಅಹಿಂಸಾ ಸತ್ಯವಚನಂ ಇತಿ ತಾ ಅಸ್ಯ ದಕ್ಷಿಣಾಃ' ಎಂದು ನಮ್ಮ ಜೀವನದಲ್ಲಿ ತಪಸ್ಸು, ದಾನ, ಆರ್ಜವ, ಅಹಿಂಸೆ, ಸತ್ಯವಚನಗಳಿಗಿರುವ ಮಹತ್ವದ ಸ್ಥಾನವನ್ನು ಸೂಚಿಸುತ್ತದೆ. ಕಠೋಪನಿಷತ್ತು 'ನವಿತ್ತೇನ ತರ್ಪಣೀಯೋ ಮನುಷ್ಯಃ' -- ಮನುಷ್ಯನಿಗೆ ಹಣದಿಂದ ಎಂದೆಂದಿಗೂ ತೃಪ್ತಿಸಿಗಲಾರದು -- ಎಂದು ಸಾರುತ್ತದೆ.

ಈ ಲೋಕದಲ್ಲಿ ನಮಗೆ ಲಭಿಸುವ ಸುಖಗಳು ಮನಸ್ಸಿಗೂ, ಇಂದ್ರಿಯಗಳಿಗೂ ತಾತ್ಕಾಲಿಕವಾಗಿ ಆಪ್ಯಾಯಮಾನವಾಗಿರಬಹುದು. ಆದರೆ ಇವು ಸ್ಥಿರವಲ್ಲ. ಈಗ ಐಹಿಕಸುಖಗಳು ಪ್ರೇಯವೇ ವಿನಹ ಶ್ರೇಯವಲ್ಲ. ಆದ್ದರಿಂದಲೆ ಉಪನಿಷತ್ತು 'ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಃ' -- ಎಂದು ಶ್ರೇಯ -- ಪ್ರೇಯಗಳ ವಿಭಾಗ ಮಾಡಿತು. ಇವೆರಡರಲ್ಲಿ ಶ್ರೇಯಸ್ಸನ್ನು ಆರಿಸಿಕೊಂಡವರಿಗೆ ಮಂಗಳವೇ ವಿನಹ ಪ್ರೇಯಸ್ಸನ್ನು ಆರಿಸಿಕೊಂಡವರಿಗಲ್ಲ, ಕೇವಲ ಐಹಿಕವಾದ ಸುಖ ಸಂಪದಗಳು ಮಾನವನಿಗೆ ನಿರತಿಶಯವಾದ ಆನಂದವನ್ನುಂಟುಮಾಡಲಾರವು. ಆದ್ದರಿಂದ ಭಗವತ್ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವುದೇ ಮಾನವನ ಗುರಿಯಾಗಬೇಕೆಂಬುದು ಉಪನಿಷತ್ತುಗಳ ನಿರ್ಣಯ.

ಕಠೋಪನಿಷತ್ತಿನಲ್ಲಿ ಯಮ ನಚಿಕೇತನಿಗೆ ನೀಡಿದ ಸಂದೇಶ ಇಂದು ನಮಗೆಲ್ಲರಿಗೂ ತೀರ ಪ್ರಸ್ತುತ. 'ಏಳಿ; ಎಚ್ಚರಗೊಳ್ಳಿ; ಶ್ರೇಷ್ಠರಾದ ಆಚಾರ್ಯರನ್ನು ಹೊಂದಿ ತಿಳಿದುಕೊಳ್ಳಿರಿ. ಹರಿತವಾದ ಕತ್ತಿಯ ಅಲಗು ದಾಟಲು ಕಷ್ಟವಾಗಿರುವಂತೆ ಆ ಪಥವು ದುರ್ಗಮವೆಂದು ಜ್ಞಾನಿಗಳು ಹೇಳುತ್ತಾರೆ.' ಜಾಗೃತರಾಗಬೇಕು; ನಾಮ - ರೂಪಗಳ ಮಿಥ್ಯಾ ಮೋಹದ ನಿದ್ರೆಯಿಂದ ನಾವು ಕಣ್ಣು ಹೊಸಕಿಕೊಂಡು ಏಳಬೇಕು. ಜ್ಞಾನಿಗಳ ಬಳಿಗೆ ಹೋಗಿ ಬ್ರಾಹ್ಮೀಸ್ಥಿತಿಗೆ ಮಾರ್ಗವನ್ನು ಅರಿತುಕೊಳ್ಳಬೇಕು.

ಆ ಮಾರ್ಗ ಕತ್ತಿಯ ಅಲಗಿನಂತೆ ದಾಟಲು ಕಷ್ಟ. ಆದರೆ ಜೀವನದಲ್ಲಿ ಯಾವ ಸಾಹಸಕ್ಕೂ ಕೈ ಹಾಕದೆ ಇದ್ದರೂ ಬಾಳು ಮೃತ್ಯುವಿನ ಕೈವಶವಾಗುವುದು. ಒಂದಲ್ಲ ಒಂದು ದಿನ ಸಾವು ನಿಶ್ಚಯವಾಗಿರುವಾಗ ಸತ್ಯಕ್ಕೆ ಹೋರಾಡಿ. ಅದನ್ನು ಪಡೆಯಲು ಮಾಡಿದ ಪ್ರಯತ್ನದಲ್ಲಿ ಮರಣೋನ್ಮುಖರಾಗುವುದರಲ್ಲಿ ಒಂದು ಆನಂದವಿದೆ. ಇಂತಹ ಧೀರನ ಗಾಯತ್ರಿ ಉಪನಿಷತ್ತುಗಳ ಸಂದೇಶದ ಪಲ್ಲವಿ. ಕತ್ತಲೆಯಲ್ಲಿ ತಡವರಿಸುವ ಮಾನವನಿಗೆ ಇವು ಉಜ್ವಲವಾದ ಕಾಂತಿಯನ್ನು ಚೆಲ್ಲುವ ರತ್ನದೀಪಗಳಾಗಿವೆ.



# ಆತ್ಮವಿದ್ಯೆ

---ವಿದ್ವಾನ್ 'ರಘುಸುತ'.

ಏಥ ಓರ್ವ ವ್ಯಕ್ತಿಗೆ ಅಲ್ಪಾಯುವನ್ನು ನೀಡಿದ್ದರೂ, ಆ ವ್ಯಕ್ತಿಯು ಆ ಅಲ್ಪಾಯುವನ್ನೆ ತನ್ನ ಜೀವನದ ಅಘಾತ ಅಂಶ ಎಂದು ಭಾವಿಸದೆ, ತನ್ನ ಮಾರ್ಗದಲ್ಲಿ ಔನ್ನತ್ಯದ ಕಡೆಗೆ ಮುಂದುವರೆದು, ಆ ಕೊರತೆಯನ್ನು ದೂರ ಮಾಡಿಕೊಂಡು, ಬ್ರಹ್ಮಸಾಕ್ಷಾತ್ಕಾರ, ತದನಂತರ ಪರಮಾತ್ಮನ ಅನುಗ್ರಹಗಳನ್ನು ಪಡೆದು ಜೀವನ್ಮುಕ್ತಿಯನ್ನು ಪಡೆದು, ಧನ್ಯರಾಗಿರುವ ಉದಾಹರಣೆಗಳು ಭಾರತೀಯ ಇತಿಹಾಸದಲ್ಲಿ ಬೇಕಾದಷ್ಟಿವೆ. ಮಾರ್ಕಂಡೇಯನು ಅಲ್ಪಾಯುವಾದರೂ ಶಿವಸಾಕ್ಷಾತ್ಕಾರದಿಂದ ಧನ್ಯನೆನಿಸಿ, ಚಿರಂಜೀವಿಯಾದ. ಅಂತೆಯೇ ನಚಿಕೇತನೂ ಕೂಡ. ಯಮಲೋಕವನ್ನು ಸಂದರ್ಶಿಸಿ, ಯಮನನ್ನು ಭೇಟಿ ಮಾಡಿ, ಅವನಿಂದ 'ಆತ್ಮವಿದ್ಯೆ', 'ಬ್ರಹ್ಮವಿದ್ಯೆ'ಗಳ 'ಜ್ಞಾನಯೋಗ'ವನ್ನು ಪಡೆದು, ಚಿರಂಜೀವಿತ್ವವನ್ನು ಪಡೆದನು. ಈ ಸಾಧನೆಯಿಂದ ಅವನು ಓರ್ವ ಅಪರೂಪ ವ್ಯಕ್ತಿಯಾದ.

ಅವನ ಜೀವನವು ಒಂದು ಚೇತೋಹಾರಿಯಾದ ಕಥಾನಕವಾಗಿದೆ. ನಂಬುವುದಕ್ಕೆ ಆಗದಂತಹ ಘಟನಾವಳಿಗಳ ಮಾಲೆ ಅವನ ಜೀವನದ ಏರಿಳಿತಗಳು.

ಅದು ಉಪನಿಷತ್ ಕಾಲ. ಉದ್ದಾಲಕನೆನ್ನುವ ಓರ್ವ ಋಷಿ ಇದ್ದ. ಅವನು ಒಮ್ಮೆ ಫಲಪ್ರಾಪ್ತಿಯ ಕಾಮನೆಯಿಂದ ಯಜ್ಞವೊಂದನ್ನು ಮಾಡಿದನು. ಅದರ ಹೆಸರು 'ವಿಶ್ವಜಿತ' ಎಂಬುದು. ಇದರ ನಿಯಮವೆಂದರೆ ಯಜ್ಞ ಸಮಾಪ್ತಿಯ ನಂತರ ಯಜ್ಞಕರ್ತನು ತನ್ನ ಸರ್ವಸ್ವವನ್ನೂ ದಾನ ಮಾಡಬೇಕು.

ಇದರನುಸಾರ ಉದ್ದಾಲಕನು ತನ್ನಲ್ಲಿನ ಸಮಸ್ತವನ್ನೂ ಋತ್ವಿಜರು ಹಾಗೂ ಬ್ರಾಹ್ಮಣರಿಗೆ ದಾನ ಮಾಡಿ, ಹಂಚಿಬಿಟ್ಟ, ತನ್ನ ಹಸುಗಳನ್ನು ಕೂಡ ದಕ್ಷಿಣೆಯ ರೂಪದಲ್ಲಿ ನೀಡಿಬಿಟ್ಟ.

ಆದರೆ ಆತನ ಮಗನಾದ ನಚಿಕೇತನು ಅದನ್ನು ನೋಡಿ ದಂಗು ಬಡಿದವನಾದ. ಏಕೆಂದರೆ ಅವನ ತಂದೆಯು ಹಾಲನ್ನು ನೀಡದ, ಮುದಿ ಹಸುಗಳನ್ನು ಮಾತ್ರ ದಾನ ನೀಡುತ್ತಿದ್ದಾನೆ. ಇಂತಹ ಮುದಿಹಸುಗಳು ದಾನ ನೀಡಲು ಯೋಗ್ಯವಾದುದಲ್ಲ. ಇದರಿಂದ ಅನರ್ಥವಾಗುವುದು. ಇದು ಪಾಪಕರ್ಮ. ವಿರುದ್ಧ ಫಲವನ್ನೂ ಕೂಡ ಈ ದಾನವು ನೀಡುವುದು. ಯಜ್ಞ ಕರ್ತನಿಗೆ ಅಮಂಗಳವನ್ನು ಉಂಟುಮಾಡುತ್ತದೆ. ಸಾತ್ವಿಕ ಬುದ್ಧಿಯಿಂದ ಕೂಡಿದ ಋಷಿಕುಮಾರ ನಚಿಕೇತನು ಇದನ್ನೆಲ್ಲ ಕಂಡು ತುಂಬಾ ಅಧೀರನಾದನು. ಉತ್ತಮವಾಗಿರುವ, ಹಾಲು ಕೊಡುವಂತಹ ಹಸುಗಳನ್ನು ತನಗಾಗಿ ಹಾಗೆಯೇ ತನ್ನಲ್ಲಿಯೇ ಇರಿಸಿಕೊಂಡು, ಗೊಡ್ಡು ಹಸುಗಳನ್ನು ದಾನವಾಗಿ ನೀಡುವುದು ನ್ಯಾಯವಾದುದಲ್ಲ ಎನ್ನುವ ಸದ್ಬುದ್ಧಿ ಬಾಲಕ ನಚಿಕೇತನಲ್ಲಿ ಉದಯಿಸಿತು. ತನಗಾಗಿ ತಂದೆಯು ಆ ಹಸುಗಳನ್ನು ಹಾಗೆಯೇ ಇಟ್ಟುಕೊಳ್ಳುತ್ತಿದ್ದಾನೆ. ಒಂದು ವೇಳೆ ತಾನು ಇಲ್ಲದಿದ್ದರೆ..... ತಂದೆ ಹೀಗೆ ಮಾಡುತ್ತಿರಲಿಲ್ಲ ಅಲ್ಲವೆ? ತನ್ನಿಂದಲೇ ತಂದೆಯು ಪಾಪಕ್ಕೆ ಭಾಗಸ್ಥನಾಗುತ್ತಿದ್ದಾನಲ್ಲವೆ?

ತಂದೆಯು ತನ್ನದೆಲ್ಲವನ್ನೂ ದಾನ ಮಾಡುತ್ತಿದ್ದಾರೆ. ಆ ಸರ್ವಸ್ವದಲ್ಲಿ ತಾನೂ ಒಬ್ಬನಲ್ಲವೆ? ತನ್ನನ್ನೇಕೆ ತಂದೆಯು ಯಾರಿಗೂ ದಾನ ಮಾಡಿಲ್ಲ? ತಾನು ತನ್ನ ತಂದೆಯ ಮಗನಾಗಿರುವುದರಿಂದ ತನ್ನಿಂದ ತಂದೆಯು ಪಾಪಭಾಗಿಯಾಗಿರುವುದರಿಂದ, ತನ್ನ ತಂದೆಯ ಅನಿಷ್ಟಕಾರಿ ಪಾಪದ ದುಷ್ಪರಿಣಾಮಗಳಿಂದ ಆತನನ್ನು ದೂರಮಾಡುವುದು ಮಗನಾದ ತನ್ನ ಕರ್ತವ್ಯವಲ್ಲವೆ? ತಾನು ತಂದೆಯ ಪಾಪವನ್ನು ಸ್ವಲ್ಪ ಮಟ್ಟಿಗಾದರೂ ದೂರಮಾಡುವುದು ಸಾಧುವಲ್ಲವೆ? ಇದಕ್ಕಾಗಿ ಅವನು ತನ್ನನ್ನು ತಾನು ಬಲಿ ನೀಡಿಕೊಳ್ಳಲು ತೀರ್ಮಾನಿಸಿದನು.

ಅಂತೆಯೇ ನಚಿಕೇತನು ತನ್ನ ತಂದೆ ಉದ್ದಾಲಕನ ಬಳಿಗೆ ಹೋಗಿ, "ತಂದೆಯೇ! ನಾನು ನಿನ್ನ ಧನಸ್ವರೂಪನು. ನನ್ನನ್ನು ಯಾರಿಗೆ ದಾನ ಮಾಡುವಿರಿ - ಎಂದು ಕೇಳಿದನು.

ಇದಕ್ಕೆ ಉದ್ದಾಲಕನು ಯಾವುದೇ ಉತ್ತರವನ್ನೂ ನೀಡಲಿಲ್ಲ. ನಚಿಕೇತನು ಮತ್ತೆ ಅದೇ ಪ್ರಶ್ನೆಯನ್ನು ತನ್ನ ತಂದೆಗೆ ಕೇಳಿದ. ಆದರೆ ಉದ್ದಾಲಕನು ಇದಕ್ಕೂ ಉತ್ತರ ನೀಡಲಿಲ್ಲ.

"ತಂದೆಯೇ! ನನ್ನನ್ನು ಯಾರಿಗೆ ದಾನ ಮಾಡುವೆ?"

ಈ ಪ್ರಶ್ನೆಯು ಉದ್ದಾಲಕನನ್ನು ಕೋಪಗೊಳಿಸಿತು. ಕ್ರೋಧಾಗ್ನಿಯಿಂದ ಆತನು ಉರಿದುಬಿದ್ದ. ಆ ಕೋಪದ ಗುಂಗಿನಲ್ಲೆ ಆತನು ಹೇಳಿದ,

"ಹೋಗು! 'ಮೃತ್ಯುವೇ ತ್ವಾಂ ದದಾಮಿತಿ' ನಿನ್ನನ್ನು ಯಮರಾಜನಿಗೆ, ಮೃತ್ಯುವಿಗೆ ನೀಡುತ್ತಿದ್ದೇನೆ".

ಇದನ್ನು ಆಲಿಸಿ, ನಚಿಕೇತನು ವಿಚಲಿತನಾಗಲಿಲ್ಲ. ಯಾವುದೇ ಪರಿಣಾಮಕ್ಕೂ ಅವನು ಸಿದ್ಧನಿದ್ದ. ಅಂತೆಯೇ ಕೈಜೋಡಿಸಿ, ತಂದೆಯೊಂದಿಗೆ ಹೇಳಿದ,

"ತಂದೆಯೆ! ಶರೀರವು ನಶ್ವರ. ಆದರೆ ಸದಾಚರಣವು ಎಲ್ಲಕ್ಕೂ ಮೇಲಿನದ್ದು. ತಾವು ಹೇಳಿದ ಮಾತನ್ನು ಕಾಪಾಡುವುದಕ್ಕಾಗಿ ಯಮಸದನಕ್ಕೆ ಹೋಗಲು ನನಗೆ ಆಜ್ಞೆ ನೀಡಿ."

ಆಲಿಸಿ, ಉದ್ದಾಲಕನು ಕಂಪಿಸಿದ. ಆದರೆ ಮಗನ ಸತ್ಯಪಾರಾಯಣತೆಯನ್ನು ಗಮನಿಸಿ, ಯಮಪುರಿಗೆ ಅವನು ಹೋಗಲು ಅನುಮತಿ ನೀಡಿದ.

ನಚಿಕೇತನು ಪಿತನ ಚರಣಗಳಿಗೆ ಭಕ್ತಿ ಪೂರ್ವಕವಾಗಿ ಪ್ರಣಾಮ ಮಾಡಿದ. ಅಲ್ಲಿಂದ ಅವನು ಯಮಪುರಿಯ ಕಡೆ ಹೊರಟ.

ಯಮಪುರಿಯನ್ನು ಅವನು ತಲುಪಿದಾಗ, ಯಮಧರ್ಮರಾಜನು ತನ್ನ ಅರಮನೆಯಲ್ಲಿ ಇರಲಿಲ್ಲ. ಮನೆಯ ಯಜಮಾನ ಕರೆಯದೆ, ಒಳಗೆ ಹೋಗುವುದಾದರೂ ಹೇಗೆ?

ಅಂತೆಯೇ ಅವನು ಯಮರಾಜನ ಅರಮನೆಯ ಎದುರುಗಡೆ ಕುಳಿತ. ಮೂರು ದಿನಗಳಾದರೂ ಯಮನು ತನ್ನ ಲೋಕಕ್ಕೆ ಬರಲಿಲ್ಲ. ಅದುವರೆವಿಗೂ ನಚಿಕೇತನು ಉಪವಾಸದಲ್ಲಿಯೇ ಇದ್ದು ಯಮನ ನಿರೀಕ್ಷೆ ಮಾಡತೊಡಗಿದ.

ಮೂರು ದಿನಗಳ ನಂತರ ಬಂದ ಯಮನಿಗೆ, ಬ್ರಾಹ್ಮಣ ಬಾಲಕನು ಮೂರು ದಿನಗಳವರೆಗೆ ತನ್ನ ಮನೆಯ ಎದುರುಗಡೆ ಉಪವಾಸವಿದ್ದ ಸಮಾಚಾರವನ್ನು ಆಲಿಸಿ, ಗಡಗಡನೆ ನಡುಗಿದ.

ಅತಿಥಿ ಬ್ರಾಹ್ಮಣನ ಸತ್ಕಾರವನ್ನು ಮಾಡದೆ ಇರುವುದರ ಕೆಟ್ಟ ಪರಿಣಾಮವನ್ನು ಯಮನು ಚೆನ್ನಾಗಿ ಅರಿತವನಾಗಿದ್ದ.

ಈ ಬಾಲಕನಾದರೊ ಅಗ್ನಿತುಲ್ಯ ತೇಜಸ್ವೀ ಋಷಿಕುಮಾರನಾಗಿರುವನು. ತಾನಿಲ್ಲದಿರುವಾಗ, ಅನ್ನ ನೀರು ಸ್ವೀಕರಿಸದೆ ಮೂರು ದಿನ ತನ್ನ ಮನೆಯ ಬಾಗಿಲ ಬಳಿ ಕಾದಿದ್ದಾನೆ. ಅದರಿಂದ ಜಲಭರಿತ ಸ್ವರ್ಣಕಳಶವನ್ನು ಕೈಗೆ ತೆಗೆದುಕೊಂಡು, ಆ ಋಷಿಕುಮಾರನನ್ನು ಸ್ವಾಗತಿಸಲು ಸ್ವತಃ ಯಮನೇ ಆತುರಾತುರವಾಗಿ ಬಂದ. ಸಮ್ಮಾನಪೂರ್ವಕವಾಗಿ ನಚಿಕೇತನಿಗೆ ಅರ್ಘ್ಯ ಪಾದ್ಯಾದಿಗಳನ್ನು ನೀಡಿದನು. ಆ ಬಾಲಕನ ಪಿತೃಭಕ್ತಿ, ದೇವಭಕ್ತಿಗಳ ಪರಿಣಾಮವಾಗಿ ಯಮನು ಅತ್ಯಂತ ಪ್ರಸನ್ನನಾಗಿದ್ದ.

ನಂತರ ಆ ಬಾಲಕನಲ್ಲಿ ಯಮನು ಈ ರೀತಿ ಬಿನ್ನವಿಸಿಕೊಂಡ,

"ಆದರಣೀಯ ಬ್ರಾಹ್ಮಣ ಕುಮಾರನೆ! ನನ್ನ ಮನೆಗೆ ಪೂಜ್ಯ ಅತಿಥಿಯಾಗಿ ನೀನು ಬಂದಿರುವೆ. ಮೂರು ದಿನ ನಿನ್ನನ್ನು ಉಪವಾಸ ಬೀಳಿಸಿ, ನಾನು ಮಹಾಪರಾಧವೆಸಗಿದ್ದೇನೆ. ಆದುದರಿಂದ ಪ್ರತಿ ರಾತ್ರಿಗೆ ಒಂದರಂತೆ, ಮೂರು ರಾತ್ರಿಗಳಿಗೆ ಒಂದೊಂದು ವರವನ್ನು ನೀನು ಕೇಳು!"

"ಹೇ ಮೃತ್ಯೋ! ನನ್ನ ಪೂಜ್ಯ ಪಿತನು ನನ್ನ ಬಗ್ಗೆ ಶಾಂತಿಯಿಂದ ಇರುವಂತೆ, ಪ್ರಸನ್ನ ಚಿತ್ತನಾಗಿ, ಕ್ರೋಧ ರಹಿತನಾಗಿರುವಂತೆ ಅನುಗ್ರಹಿಸು. ನಿನ್ನಲ್ಲಿಂದ ನನ್ನ ಮನೆಗೆ ಹಿಂತಿರುಗಿದಾಗ, ನನ್ನ ತಂದೆಯು ನನ್ನನ್ನು ಮಗನಂತೆ ಕಂಡು, ಪ್ರೇಮದಿಂದ ನನ್ನನ್ನು ಮಾತನಾಡಿಸಲಿ! ನನ್ನ ತಂದೆಯು ಚಿಂತೆಗಳಿಂದ ಮುಕ್ತನಾಗಲಿ!"

ಯಮಧರ್ಮನು ಈ ಮಾತುಗಳ ಮುಖಾಂತರ ಮೊದಲನೆ ವರವನ್ನು ನೀಡಿದನು.

"ಬಾಲಕ! ಯಾವ ರೀತಿಯಲ್ಲಿ ಮೊದಲಿನಿಂದಲೂ ನಿನ್ನ ಬಗೆ ಪ್ರಸನ್ನತೆಯಿಂದ ಇರುತಿದನೊ, ನೀನು ಹಿಂತಿರುಗಿದ ಮೇಲೂ ಹಾಗೆಯೇ ಇರುವನು. ನಿನ್ನ ಮೇಲೆ ಕೋಪದಿಂದ ಇರುವುದಿಲ್ಲ. ನಿನ್ನನ್ನು ಗುರ್ತಿಸಿ, ನಿನ್ನ ಬಗ್ಗೆ ಪ್ರಸನ್ನತೆಯಿಂದ ಇರುವನು. ತನ್ನ ಕೋಪವನ್ನೆಲ್ಲ ಆತ ಮರೆತು ಇರುವನು. ರಾತ್ರಿಗಳನ್ನು ತುಂಬು ಸಂತೋಷದಿಂದ ನಿದ್ದೆ ಮಾಡುತ್ತಾ ಕಳೆಯುವನು."

ಮೊದಲನೇ ವರವನ್ನು ಪಡೆದ ನಚಿಕೇತನು ಇದನ್ನು ಆಲಿಸಿ ತುಂಬಾ ಸಂತೋಷಗೊಂಡನು.

"ಮೃತ್ಯೋ! ಸ್ವರ್ಗವನ್ನು ಪಡೆಯುವುದಕ್ಕೆ ಸಾಧನವಾದ ಅಗ್ನಿಯ ಬಗ್ಗೆ ನಿನಗೆ ಚೆನ್ನಾಗಿ ಗೊತ್ತಿರಲೇಬಹುದು. ಆತನ ಬಗೆಗೆ ತಿಳಿದುಕೊಂಡು ಜನರು ಸ್ವರ್ಗದಲ್ಲಿ ಅಮೃತತ್ವ, ಅಮರತ್ವ ಹಾಗೂ ದೇವತ್ವವನ್ನು ಪಡೆಯುವರು. ಭೂಮಿಯ ಮೇಲೆ ಇದ್ದೂ ಅವನ್ನು ಪಡೆಯಲು ಮಾರ್ಗ ತೋರಿಸುವ 'ಅಗ್ನಿವಿದ್ಯೆ'ಯನ್ನು ನನಗೆ ಉಪದೇಶಿಸು! ಇದೇ ನನ್ನ ಎರಡನೇ ವರ!"

"ತಥಾಸ್ತು!" ಎಂದ ಯಮಧರ್ಮನು, "ಈ ಅಗ್ನಿಯು ಅನಂತ ಸ್ವರ್ಗಲೋಕದ ಪ್ರಾಪ್ತಿಯ ಸಾಧನವಾಗಿದೆ". ನಚಿಕೇತನಲ್ಲಿ ತೀಕ್ಷ್ಣಬುದ್ಧಿ ಹಾಗೂ ವಾಸ್ತವಿಕ ಜಿಜ್ಞಾಸು ಮನಸ್ಸತ್ವ ಇರುವುದನ್ನು ಗಮನಿಸಿ, ಆತನು ತುಂಬಾ ಸಂತೋಷಪಟ್ಟನು. ಮುಂದುವರೆದು ಹೇಳಿದನು, "ಇದೇ ವಿರಾಟ್‌ರೂಪದಲ್ಲಿ ಜಗತ್ತಿನ ಪ್ರತಿಷ್ಠೆಯ ಮೂಲಕಾರಣವಾಗಿರುತ್ತದೆ. ಇದನ್ನು ನೀನು ವಿದ್ವಾಂಸರ ಬುದ್ಧಿರೂಪದ ಗುಹೆಗಳಲ್ಲಿರುವುದನ್ನು ಕಾಣುವೆ."

ಆ ಅಗ್ನಿ ಆವಾಹನೆಗಾಗಿ ಯಾವ ರೀತಿಯ, ಎಷ್ಟು ಇಟ್ಟಿಗೆಗಳ ಆವಶ್ಯಕತೆ ಇದೆ, ಅದನ್ನು ಯಾವ ರೀತಿಯಲ್ಲಿ ಅಗ್ನಿಚಿಕೆಯಲ್ಲಿ ಇರಿಸಬಹುದು, ಹಾಗೂ ಯಜ್ಞಸ್ಥಳದ ನಿರ್ಮಾಣಕ್ಕಾಗಿ ಬೇಕಾಗಿರುವ ಸಾಮಗ್ರಿಗಳು ಹಾಗೂ ಅಗ್ನಿಚಯ್ಯ ಮಾಡುವ ರೀತಿಯನ್ನೆಲ್ಲ ಯಮನು ತಿಳಿಯಹೇಳಿದನು. ನಚಿಕೇತನು ಈ ಜ್ಞಾನವನ್ನು ಆಸ್ವಾದಿಸಿದ ರೀತಿಯಿಂದ ತುಂಬಾ ಸಂತುಷ್ಟನಾದ ಯಮನು ಎರಡನೆ ವರವನ್ನು ನೀಡುವ ರೂಪದಲ್ಲಿ ಹೀಗೆಂದನು.

"ನಾನು ಯಾವ ಅಗ್ನಿಯ ಮಾತನ್ನು ನಿನ್ನೊಂದಿಗೆ ತಿಳಿಸಿರುವೆನೊ, ಅದು ನಿನ್ನದೇ ಹೆಸರಿನ -- ನಚಿಕೇತಾಗ್ನಿ -- ಎನ್ನುವ ಹೆಸರಿನಲ್ಲಿ ಪ್ರಸಿದ್ಧ ಹೊಂದಲಿ. ಇದರೊಂದಿಗೆ ವಿಚಿತ್ರ ರತ್ನಗಳಿಂದ ಕೂಡಿದ ಈ ಮಾಲೆಯನ್ನೂ ಸ್ವೀಕರಿಸು!"

ಎಂದು ಯಮನು ಅವನಿಗೆ ಒಂದು ರತ್ನಾಹಾರವನ್ನು ನೀಡಿದನು. ಮುಂದೆ ಆತ ಕೇಳಿದನು.

"ತೃತೀಯ ವರಂ ನಚಿಕೇತಾ ವೃಣೀಷ್ವ! -- ಹೇ ನಚಿಕೇತಾ! ಈಗ ಮೂರನೇ ವರವನ್ನು ಕೇಳು!" ಎಂದು ಅಗ್ನಿಯು ಸ್ವರ್ಗ ಪಡೆಯುವ ಉತ್ತಮ ಸಾಧನ ಎಂಬುದನ್ನು ಚೆನ್ನಾಗಿ ವಿವರಿಸಿದ ನಂತರ ಯಮ ಕೇಳಿದ. ಶ್ರದ್ಧಾ ಸಮನ್ವಿತನಾದ ನಚಿಕೇತನು ಕೇಳಿದನು, "ಹೇ ದೇವಾ! ನೀನು ಮೃತ್ಯುವಿಗೇ ದೇವತೆಯಾಗಿರುವೆ! ಪ್ರತ್ಯಕ್ಷ ಅಥವಾ ಅನುಮಾನದಿಂದ ಆತ್ಮದ ನಿರ್ಣಯವಾಗುವುದಿಲ್ಲ. ಆದುದರಿಂದ ನಿನ್ನಿಂದಲೇ ಆತ್ಮ-- ತತ್ವವನ್ನು ತಿಳಿದುಕೊಳ್ಳಲು ಇಷ್ಟಪಡುತ್ತೇನೆ. ಜೀವಾತ್ಮನಿಗೆ ಶರೀರದೊಂದಿಗೆ ಯಾವ ಸಂಬಂಧವಿದೆ? ಮೃತ್ಯುವಿನ ನಂತರ ಆತ್ಮದ ಅಸ್ತಿತ್ವ ಹೇಗಿರುತ್ತದೆ ? ಶರೀರದಿಂದ ಬೇರೆಯಾಗಿ ಜೀವಾತ್ಮದ ಅಸ್ತಿತ್ವ ಇರುತ್ತದೆಯೆ, ಇಲ್ಲವೆ ? ಆತ್ಮ ಎಂದರೆ ಏನು ? ಬ್ರಹ್ಮನೊಂದಿಗೆ ಆತ್ಮದ ಸಂಬಂಧವೇನು ? ಕೃಪೆ ಇಟ್ಟು ಇವೆಲ್ಲ ರಹಸ್ಯಗಳನ್ನೂ ನನಗೆ ತಿಳಿಯ ಹೇಳುವವನಾಗು!"

ಈ ಪ್ರಶ್ನಮಾಲೆಯನ್ನು ಆಲಿಸಿ ಯಮನು ಗಾಬರಿಗೊಂಡನು. ಇಷ್ಟು ಸಣ್ಣ ಬಾಲಕನಿಗೆ ಇಷ್ಟೊಂದು ಮಹತ್ವದ ಪ್ರಶ್ನಾವಳಿಯೆ! ಎಂತಹ ಮಹಾನ್ ಋಷಿ, ಜ್ಞಾನಿಗಳಿಗೂ ಅರ್ಥವಾಗದ ಈ ವಿಷಯದ ಬಗ್ಗೆ ಈ ಬಾಲಕನಿಗೆ ಇರುವ ಆಸಕ್ತಿಯಾದರೂ ಎಂತಹುದು?

ಏಕೆಂದರೆ ಆತ್ಮ-- ವಿದ್ಯೆಯು ಸಾಧಾರಣ ವಿದ್ಯೆಯಲ್ಲ. ಅದರಿಂದ ಆ ವಿದ್ಯೆಯ, ಜ್ಞಾನದ ಗೂಢತೆ, ಕಠಿಣತೆಗಳನ್ನು ಯಮನು ವಿವರಿಸಿದ. ಆದರೆ ನಚಿಕೇತನು ಆ ಜ್ಞಾನವನ್ನು ಪಡೆಯದೇಕೆನ್ನುವ ಗಟ್ಟಿ ಮನಸ್ಸಿನಿಂದ ದೂರ ಸರಿಯಲಿಲ್ಲ.

ಕೊನೆಗೆ ಯಮನು ಭುವನ ಮೋಹನ ಅಸ್ತ್ರವನ್ನು ಪ್ರಯೋಗಿಸಿದ,

"ಬ್ರಹ್ಮವಿದ್ಯೆ ಹಾಗೂ ಆತ್ಮವಿದ್ಯೆಗಳನ್ನು ಅರಿಯುವುದು ಸುಲಭವೇನಲ್ಲ. ನಿನ್ನಂತಹ ಮುಗ್ಧ ಬಾಲಕನಿಗಂತೂ ಆ ಗೂಢತೆಯನ್ನೆಲ್ಲ ಅರಿಯುವುದು ತುಂಬಾ ಕಠಿಣ. ಅಲ್ಲದೆ ನೀನು ಅಲ್ಪಾಯುಷಿಯಾಗಿದ್ದೀಯೆ; ಅದರಿಂದ ನೀನು ಆ ಜ್ಞಾನವನ್ನು ಅರಿಯಲು ಯೋಗ್ಯನಾಗಿಲ್ಲ. ಆತ್ಮವಿದ್ಯೆಯನ್ನು ತಿಳಿಯಲೋಸುಗ ಪ್ರಾಚೀನ ಕಾಲದಿಂದಲೂ ಅನೇಕ ವ್ಯಕ್ತಿಗಳು ನಿನ್ನ ತರಹ ಪ್ರಶ್ನಿಸಿ, ನಿರಾಶೆಗೊಂಡಿದ್ದಾರೆ. ಅವರು ಆತ್ಮಜ್ಞಾನದ ಒಂದು ಅಣುವನ್ನೂ ಅರ್ಥಮಾಡಿಕೊಳ್ಳಲಾರದವರಾದರು. ಅವರಿಗೇ ಅರ್ಥವಾಗದ ಗೂಢತೆ ಹಾಗೂ ರಹಸ್ಯಗಳು ಬಾಲಕನಾದ ನಿನಗೆ ಹೇಗೆ ಅರ್ಥವಾದೀತು? ಆದುದರಿಂದ ಓ ನಚಿಕೇತಾ! ಇದಕ್ಕೆ ಬದಲಾಗಿ ಬೇರೆ ವರವನ್ನು ಕೇಳು!"

ಎಂದು ಸುರಲೋಕಕ್ಕೂ ದುರ್ಲಭವಾದ ಸುಂದರಿಯರು ಹಾಗೂ ದೀರ್ಘ ಕಾಲದವರೆಗೆ ಇರುವಂತಹ ಭೋಗ ಸಾಮಗ್ರಿಗಳ ಪ್ರಲೋಭನೆಯನ್ನು ತೋರಿದ.

ಆದರೆ ನಚಿಕೇತನು ತನ್ನ ದೃಢ ನಿರ್ಧಾರದಿಂದ ಹಿಂದೆ ಸರಿಯಲಿಲ್ಲ. ಅವನು ಏಕಾಗ್ರ ಮನದಿಂದ ಆತ್ಮತತ್ವವನ್ನು ಅರಿಯಲು ಹಠ ತೊಟ್ಟಿದ್ದ.

"ಪೂಜ್ಯ ಗುರುವೆ! ಜನರು ಯಾರೂ ಆತ್ಮವಿದ್ಯೆಯನ್ನು ಅರಿಯಲಾರರು. ಎಂದು ಈಗ ತಾನೆ ಹೇಳಿದ್ದೆ. ಅಂದರೆ ಕೆಲವರಾದರೂ ಇದನ್ನು ಅರ್ಥಮಾಡಿಕೊಳ್ಳಬಲ್ಲರು ಎಂದರ್ಥವಾಗುತ್ತದೆ. ಆತ್ಮದ ಬಗ್ಗೆ ತಪ್ಪದೆ ನೀನು ತಿಳಿಸಲೇಬೇಕು. ಅದನ್ನರಿಯುವುದರಿಂದ ನನಗೆ ತುಂಬಾ ಶ್ರೇಯಸ್ಸಾಗುವುದೆಂಬ ನಂಬಿಕೆ ನನಗಿದೆ".

ಇದಕ್ಕೆ ಉತ್ತರವಾಗಿ ಯಮನೂ ಕೂಡ ತನ್ನ ಹಠವನ್ನೇ ಮುಂದುವರಿಸಿದ. ಪ್ರಪಂಚದ ಸಂಪತ್ತು, ವೈಭವಗಳನ್ನು ಪ್ರಸಾದಿಸುವುದಾಗಿ ಬಣ್ಣ ಬಣ್ಣದ ಮಾತುಗಳನ್ನಾಡಿದ. ಆತ್ಮವಿದ್ಯೆಯಂತಹ ನೀರಸ ವಿಷಯ ಬಾಲಕರಿಗೆ ಬೇಡ -- ಎಂದೆಲ್ಲ ಉಪದೇಶಿಸಿದ. 'ಆತ್ಮವಿದ್ಯೆ'ಯಂತಹ ಉತ್ಕೃಷ್ಟ ವಿದ್ಯೆಯನ್ನು ಮಾನವನಿಗೆ ನೀಡಲು ಆತನು ಇಷ್ಟಪಟ್ಟಿರಲಿಲ್ಲ.

✤✤✤✤✤ ✤✤✤✤✤✤✤

*ತಿರುಮಲೆ -- ತಿರುಪತಿ ದೇವಸ್ಥಾನಗಳು*

## ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.

✤✤✤✤✤✤✤ ✤✤✤✤✤

ಆದರೆ ಯಮಧರ್ಮನ ಈ ರೀತಿಯ ಪ್ರತಿಯೊಂದು ಮಾತಿನ ತರ್ಕವನ್ನೂ ನಚಿಕೇತನು ತನ್ನ ವಾದದ ಪ್ರಭಾವದಿಂದ ಕತ್ತರಿಸಿ ಹಾಕತೊಡಗಿದ, ತನಗೆ ಆ ವಿದ್ಯೆಯನ್ನು ಉಪದೇಶಿಸಲೇ ಬೇಕೆಂದು. ಅನೇಕ ದಿನಗಳವರೆಗೆ ಆಧ್ಯಾತ್ಮಿಕವಾದ ಪ್ರತಿವಾದಗಳು ನಡೆದುವು. ಪ್ರತಿ ಸಲವೂ ಯಮನು ಒಂದಲ್ಲ ಒಂದು ನೆವವನ್ನು ನೀಡತೊಡಗಿದ. ಆದರೆ ಇದು ಬಹಳ ಸಮಯದವರೆಗೆ ನಡೆಯಲಿಲ್ಲ. ನಚಿಕೇತನನ್ನು ಪರೀಕ್ಷಿಸುತ್ತಾ ಹೋದಂತೆ, ಅವನ ದೃಢಚಿತ್ತವನ್ನು ಗಮನಿಸಿ, ಯಮನು ನಿಧಾನವಾಗಿ ಕುಸಿಯತೊಡಗಿದ. ಕಡೆಗೆ ನಚಿಕೇತನ ಬೇಡಿಕೆಗೆ ಮನ್ನಣೆ ನೀಡಲೇಬೇಕಾಯಿತು.

"ನೀನು ತುಂಬಾ ಭಾಗ್ಯವಂತ ನಚಿಕೇತಾ!" ಎಂದು ಯಮನು ಅವನ ವೈರಾಗ್ಯವನ್ನು ಮನತುಂಬಿ ಪ್ರಶಂಸಿಸಿದ. ಪ್ರಾಪಂಚಿಕ ಸುಖ ಭೋಗಗಳನ್ನು ಹಿಮ್ಮೆಟ್ಟಿಸುತ್ತಾ, ವಿವೇಕ -- ವೈರಾಗ್ಯ ಸಂಪನ್ನನಾದ ವ್ಯಕ್ತಿಯೇ ಬ್ರಹ್ಮಜ್ಞಾನವನ್ನು ಪಡೆಯಲು ಅಧಿಕಾರ ಉಳ್ಳವನು -- ಎಂದು ತಿಳಿಸಿ, ಶ್ರೇಯ ಪ್ರೇಯ ಹಾಗೂ ವಿದ್ಯಾ -- ಅವಿದ್ಯಾಗಳ ವೈಪರೀತ್ಯ ಸ್ವರೂಪವನ್ನು ಪರಿಪೂರ್ಣವಾಗಿ ಯಮನು ವರ್ಣಿಸಿದನು.

ಆ ನಂತರ ಆತನು ನಚಿಕೇತನಿಗೆ ಹೇಳಿದನು, "ನೀನು ಶ್ರೇಯವನ್ನು ಇಷ್ಟಪಡುವವನಾಗಿರುವೆ. ಅದರಿಂದ ಈ ವಿದ್ಯೆಗೆ ನೀನು ಅರ್ಹನಾಗಿರುವೆ!"

"ಹೇ ಭಗವನ್! ನೀನು ನನ್ನ ಮೇಲೆ ಪ್ರಸನ್ನಗೊಂಡಿರುವೆಯಾಗಿದ್ದರೆ ಎಲ್ಲ ರೀತಿಯ ಪ್ರಾಪಂಚಿಕ ವ್ಯಾವಹಾರ ವಿಷಯಗಳಿಗೆ ಅತೀತನಾಗಿರುವ, ನೀನು ಸದಾ ಕಾಣುತ್ತಿರುವ, ಆ ಪರಬ್ರಹ್ಮನ ಬಗೆಗೆ ನನಗೆ ತಿಳಿಸುವ ಕೃಪೆ ಮಾಡು!"

ಅಂತೆಯೇ ಪ್ರಸನ್ನ ಚಿತ್ತದಿಂದ ಯಮಧರ್ಮನು ಆತ್ಮವಿದ್ಯೆಯ ಬಗೆಗೆ ಉಪದೇಶ ಮಾಡಲು ಪ್ರಾರಂಭಿಸಿದನು.

'ಆತ್ಮನೇ ಚೇತನನು. ಅವನಿಗೆ ಜನ್ಮ ಮರಣಗಳಿಲ್ಲ. ಇವನು ಯಾರಿಂದಲೂ ಜನಿಸಿದವನಂತೂ ಅಲ್ಲವೇ ಅಲ್ಲ. ಇವನಿಂದ ಯಾರೂ ಜನಿಸಿದವರೂ ಇಲ್ಲ.......... ಆತ್ಮನು ನಿತ್ಯನು, ಶಾಶ್ವತನು, ಸನಾತನನಾಗಿದ್ದಾನೆ. ಶರೀರ ನಾಶವಾದರೂ ಅವನು ನಾಶವಾಗುವುದಿಲ್ಲ. ಅವನು ಸೂಕ್ಷ್ಮಾತಿ ಸೂಕ್ಷ್ಮನೂ, ಮಹಾನ್‌ಗೆ ಮಹಾನನೂ ಆಗಿರುವನು. ಅವನು ಎಲ್ಲ ಅನಿತ್ಯ ಶರೀರಗಳಲ್ಲಿ ಇರುವವನಾಗಿದ್ದರೂ, ಶರೀರ ರಹಿತನಾಗಿರುವನು. ಎಲ್ಲ ಅಸ್ಥಿರ ಪದಾರ್ಥಗಳಲ್ಲಿ ವ್ಯಾಪ್ತನಾಗಿದ್ದರೂ, ಅವನು ಸದಾ ಸ್ಥಿರನಾಗಿರುವನು. ಅವನು ಕಣಕಣದಲ್ಲೂ ವ್ಯಾಪ್ತನಾಗಿರುವನು. ಸಮಸ್ತ ಸೃಷ್ಟಿಕ್ರಮವು ಅವನ ಆದೇಶದಂತೆಯೇ ನಡೆಯುತ್ತದೆ. ಅವನ ಭಯದಿಂದಲೇ ಅಗ್ನಿಯು ಜ್ವಲಿಸುವನು, ಸೂರ್ಯನು ಬಿಸಿಲನ್ನು ನೀಡುವನು, ಇಂದ್ರ, ವಾಯು, ಮೃತ್ಯು ಅವನ ಭಯದಿಂದಲೇ ಓಡಾಡುತ್ತಾರೆ. ಕಾಲಗರ್ಭದಲ್ಲಿ ಲೀನವಾಗುವುದಕ್ಕೆ ಮುಂಚೆ ಅವನ ಬಗ್ಗೆ ತಿಳಿದಿರುವವರು ಮುಕ್ತರೆನಿಸುತ್ತಾರೆ. ಶೋಕ ಇತ್ಯಾದಿ ಕ್ಲೇಶಗಳ ಎಲ್ಲೆಯನ್ನು ದಾಟಿ, ಪರಮಾನಂದವನ್ನು ಪಡೆಯುವರು.'

ಯಮನು ಮುಂದುವರಿಸಿ ಹೇಳಿದ, ವೇದಗಳ ಪ್ರವಚನದಿಂದ ಅವನನ್ನು ಪಡೆಯಲಾಗುವುದಿಲ್ಲ. ವಿಶಾಲ ಬುದ್ಧಿಯಿಂದಲೂ ಅವನು ನಮಗೆ ದೊರೆಯುವುದಿಲ್ಲ. ಜನ್ಮ ಪೂರ್ತಿ ಶಾಸ್ತ್ರಗಳ ಅಧ್ಯಯನ ಮಾಡುವುದರಿಂದಲೂ ಅವನನ್ನು ಪಡೆಯಲಾಗುವುದಿಲ್ಲ.

ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ

ಯಾವನು ಅರಿಷಡ್ವರ್ಗಗಳನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವನೊ, ಯಾರ ಹೃದಯದಲ್ಲಿ [illegible] ಅಂತಹವನಿಗೆ ಮಾತ್ರ ಆತ್ಮಾನಂದವು ದೊರೆಯುತ್ತದೆ.

'ಓಂ ಅಕ್ಷರವು ಶಕ್ತಿಯುತವಾದುದು. ಅದು ನಾಶರಹಿತವಾದುದು. ಇದರ ಒಂದು ಅಂಶವೇ ಜೀವಾತ್ಮನು.'

ಎಂದು ಯಮನು ಭಕ್ತಿಯೋಗ, ಜ್ಞಾನಯೋಗ ಹಾಗೂ ಕರ್ಮಯೋಗಗಳ ತ್ರಿಪುಟಿಯನ್ನು ಆತ್ಮ ಸಂಬಂಧದಲ್ಲಿ ವಿವರಿಸಿ, ಈ ಮುಖಾಂತರ ನಚಿಕೇತನಲ್ಲಿ 'ಆತ್ಮವಿದ್ಯೆ' ಹಾಗೂ 'ಬ್ರಹ್ಮವಿದ್ಯೆ'ಗಳ ಜ್ಞಾನವು ಹೃದಯದಲ್ಲಿ ಆಳವಾಗಿ ನಾಟುವಂತೆ ಮಾಡಿದನು.

ಈ ಜ್ಞಾನಪ್ರಾಪ್ತಿಯಿಂದ ನಚಿಕೇತನು ಅಮರನೆನ್ನಿಸಿ, ತನ್ನ ಅಲ್ಪಾಯುಷ್ಯದ ಕೊರತೆಯನ್ನು ದೂರ ಮಾಡಿಕೊಂಡು ಚಿರಂಜೀವಿಯಾದ. ಮುಂದೆ ಬರುವ ಅನೇಕ ಬಾಲಕರಿಗೆ ಇವನು ಆದರ್ಶನಾದ, ಮಾದರಿಯಾದ.



# ಕರ್ನಾಟಕ ಸಂಗೀತಕ್ಕೆ ಹರಿದಾಸರ ಕೊಡುಗೆ

---ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

## ಹಿನ್ನೆಲೆ :

ಭಾರತೀಯ ಇತಿಹಾಸದಲ್ಲಿ ವೇದೋಪನಿಷತ್ತಿನ ಕಾಲದಿಂದಲೇ ಭಕ್ತಿಯ ಮೇಲ್ಮೆ ಪ್ರತಿಪಾದಿತವಾಗಿತ್ತು. ಭಕ್ತಿ ಸಾಹಿತ್ಯವು ಉತ್ತರ ಭಾರತದಲ್ಲಿ ಸಂಸ್ಕೃತದಲ್ಲಿ ಹೆಚ್ಚಾಗಿ ಬೆಳೆಯಿತು. ಭಕ್ತಿಯನ್ನು ಪ್ರಧಾನ ಸೂತ್ರವನ್ನಾಗಿ ಅಂಗೀಕರಿಸಿ, ಭಕ್ತಿ ಪಂಥಗಳನ್ನು ಸ್ಥಾಪಿಸಿದ ಕೀರ್ತಿ ದಕ್ಷಿಣಭಾರತಕ್ಕೆ ಸೇರಿದೆ. ವೈದಿಕ ಧರ್ಮದ ಪುನರುತ್ಥಾನಮಾಡಿದ ಆದಿ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು ಮತ್ತು ಶ್ರೀಮಧ್ವಾಚಾರ್ಯರು ಕರ್ನಾಟಕವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು ಎಂಬುದು ಐತಿಹಾಸಿಕ ವಿಷಯ. ಈ ಆಚಾರ್ಯತ್ರಯರು ವೈದಿಕ ಧರ್ಮಕ್ಕೆ ವಿರುದ್ಧವಾದ ನಾಸ್ತಿಕ ಧರ್ಮಗಳು ಬೆಳೆಯದಂತೆ ಮಾಡಿ, ವೈದಿಕ ಧರ್ಮವು ಪುನಃ ದಕ್ಷಿಣದಿಂದ ಉತ್ತರಕ್ಕೆ ಪ್ರವಹಿಸುವಂತೆ ಮಾಡಿದರು ಎಂಬುದನ್ನು ಇಲ್ಲಿ ಸ್ಮರಿಸಬಹುದು.

ಉತ್ಪನ್ನಾದ್ರಾವಿಡೇನಾಹಂ
ವೃದ್ಧಿಂ ಕರ್ನಾಟಕೇ ಗತಾ
ಕ್ವಚಿತ್ ಕ್ವಚಿತ್ ಮಹಾರಾಷ್ಟ್ರೇ
ಗುಜನರೇ ಜರ್ಜರಾಂಗತಾ

ಎಂಬ ಪದ್ಮಪುರಾಣದ ವಚನವನ್ನು ಗಮನಿಸಿದರೆ ಭಕ್ತಿಯು ದಕ್ಷಿಣದಿಂದ ಉತ್ತರಕ್ಕೆ ಪ್ರವಹಿಸಿದ ಪವಿತ್ರವಾಹಿನಿಯಾಯಿತೆಂದು ತಿಳಿಯುತ್ತದೆ. ತಮಿಳಾದರೇನು? ಯಾವ ಭಾಷೆಯಾದರೇನು? ಭಕ್ತಿಸಾಹಿತ್ಯದ ಹೃದಯದಲ್ಲಿ ಸ್ಥಿತವಾಗಿರುವ ದೇವತೆಯು ಒಂದೇ ಎಂಬುದೂ, ಭಕ್ತಿ ಸಾಹಿತ್ಯದ ಭಾಷಾತೀತವಾದ ಒಂದು ನಕ್ಷೆ ಈ ವರ್ಣನೆಯಿಂದ ತಿಳಿಯಬಹುದು. ಭಕ್ತಿವಾಹಿನಿಯು ಯಮಳ ನದಿಗಳಂತೆ ಹರಿಯಿತು -- ಒಂದು ಶಿವಭಕ್ತಿ, ಮತ್ತೊಂದು ವಿಷ್ಣು ಭಕ್ತಿ. ಶೈವನಾಯನ್ಮಾರರು ಮತ್ತು ವೈಷ್ಣವ ಆಳ್ವಾರರು ಜಾತಿ, ಮತ, ಕುಲ, ಗೋತ್ರ, ಲಿಂಗಭೇದಗಳಾವುವೂ ಇಲ್ಲದೆ, ಕೇವಲ ತಮ್ಮ ಅನುಭವ ಪ್ರಾಮಾಣ್ಯದಿಂದ ದೈವಭಕ್ತಿಯ ಸ್ವರೂಪ ಮತ್ತು ಹಿರಿಮೆಯನ್ನು ಸಾರಿದರು. ವಿಷ್ಣುಭಕ್ತರಿಗೆ ಶ್ರೀರಂಗದ ರಂಗನಾಥನೂ, ಫಂಡರಪುರದ ಪಾಂಡುರಂಗ ವಿಠಲನೂ ಏಕೈಕ ದೈವವಾಗಿದ್ದುದಲ್ಲದೆ ಈ ಭಕ್ತಿಸಾಹಿತ್ಯದ ಹೃದಯವಾಗಿದ್ದನು. ದಕ್ಷಿಣಭಾರತದ ಭಕ್ತಿಸಾಹಿತ್ಯಕ್ಕೆ ತಮಿಳು ನಾಡಿನ ನಾಯನ್ಮಾರರ ಗೀತೆಗಳೂ, ಆಳ್ವಾರರ ದಿವ್ಯ ಪ್ರಬಂಧಗಳೂ ಉಗಮಗಳಾಗಿವೆ.

ಸುಮಾರು ಕ್ರಿ.ಶ. ೯ನೇ ಶತಮಾನಕ್ಕು ಹಿಂದೆಯೇ ತಮಿಳುನಾಡಿನಲ್ಲಿ ಶೈವನಾಯನ್ಮಾರರು ಶಿವಭಕ್ತಿಗೂ, ವೈಷ್ಣವ ಆಳ್ವಾರರು ವಿಷ್ಣುಭಕ್ತಿಗೂ ಅಗ್ರಸ್ಥಾನವನ್ನು ತಂದುಕೊಟ್ಟರು. ತಮ್ಮ ಆಳವಾದ ಭಗವದನುಭವದಿಂದ ದೈವಭಕ್ತಿಯ ಹಿರಿಮೆ, ಗರಿಮೆಗಳನ್ನು ಇವರು ಜನರ ಭಾಷೆಯಲ್ಲಿ ಹಾಡಿ ಹರಡಿದರು. ನಾಯನ್ಮಾರರು ಹಾಡಿರುವ ತೇವಾರಂ, ತಿರುವೆಂಬಾ, ತಿರುವಂದಾದಿ, ತಿರುವಾಚಕಂ, ತಿರುಪ್ಪಗಳ್ ಮುಂತಾದುವೂ, ಆಳ್ವಾರರು ಹಾಡಿರುವ ನಾಲಾಯಿರ ದಿವ್ಯಪ್ರಬಂಧಂ -- ತಿರುವಾಯಿಮೊಳಿ (ಸಿರಿಬಾಯಿನುಡಿ) ಅಥವಾ ದ್ರಾವಿಡ ವೇದವನ್ನು ಈಗಲೂ ಹೆಚ್ಚಾಗಿ ತಮಿಳುನಾಡಿನ ಶಿವ ಮತ್ತು ವಿಷ್ಣು ದೇವಾಲಯಗಳಲ್ಲಿ ಮತ್ತು ಕರ್ನಾಟಕದ ಹಲವು ದೇವಾಲಯಗಳಲ್ಲಿ ನಿತ್ಯಾನುಸಂಧಾನ ಮಾಡುವುದನ್ನು ನಾವು ಕೇಳಬಹುದಾಗಿದೆ.



ನಾಯನ್ಮಾರರು ಹರಡಿದ ಶೈವಭಕ್ತಿಯು ಕನ್ನಡ ನಾಡಿನಲ್ಲಿ ರೂಪುಗೊಂಡು ಬೆಳೆಯಿತು. ವೀರಶೈವ ಧರ್ಮದ ಅನುಯಾಯಿಗಳು ಕನ್ನಡದಲ್ಲಿ ವಿನೂತನವಾದ ವಚನಗಳೆಂಬ ರಚನೆಗಳ ಮೂಲಕ ಭಕ್ತಿ ಸಾಹಿತ್ಯವನ್ನು ಬೆಳೆಸಿದರು. ಶ್ರೀರಾಮಾನುಜಾಚಾರ್ಯರ ಮತ್ತು ಶ್ರೀ ಮಧ್ವಾಚಾರ್ಯರ ಭಕ್ತಿ ಸಿದ್ಧಾಂತಗಳು ಉತ್ತರಭಾರತದಲ್ಲಿ ಹಲವು ಉಪಶಾಖೆಗಳಾಗಿ ಬೆಳೆದುವು. ಸಮಾಜೋದ್ಧಾರ, ಧರ್ಮದ ಪುನರುಜ್ಜೀವನ, ತನ್ಮೂಲಕ ದೇಶ ಮತ್ತು ಸಂಸ್ಕೃತಿಗ



ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ – ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ./ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ಹೊಸ ಚಂದಾನಂಬರುಗಳನ್ನು ನೀಡಲಾಗಿದೆ. ದಯವಿಟ್ಟು ಗಮನಿಸಿ.
* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಹೊಸ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :
**ಸಪ್ತಗಿರಿ**
ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**



ಳಲ್ಲಿ ಅಭಿಮಾನವನ್ನು ಪ್ರಬಲಗೊಳಿಸುವುದು ಈ ಭಕ್ತಿ ಚಳುವಳಿಯ ಮುಖ್ಯಗುರಿ.

ಕರ್ನಾಟಕದ ವಚನಕಾರರು ಅಂದರೆ ಶಿವದಾಸರು ನೂರಾರು ಪದಗಳ ರೂಪದಲ್ಲಿರುವ ವಚನಗಳನ್ನು ಕನ್ನಡದಲ್ಲಿ ರಚಿಸಿದರು. ಈ ಶಿವಶರಣರು ವಿವಿಧ ರಾಗಗಳಲ್ಲಿ ಹಾಡಿದ ಹಾಡುಗಳನ್ನು ಆಲಿಸಿ ಜನರು ಆಕರ್ಷಿತರಾದರು. ಅವರ ವಚನಗಳಲ್ಲಿ ಬತ್ತೀಸರಾಗಗಳ (೩೨) ಮತ್ತು ರಾಗದ ಪ್ರಸ್ತಾಪವಿದೆ. "ಬತ್ತೀಸರಾಗವ ಹಾಡಯ್ಯ ಉರದಲೊತ್ತಿ ಬಾರಿಸು ಕೂಡಲಸಂಗಮದೇವ", "ದೇಶಾಕ್ಷಿಯಲ್ಲದರಾಗ, ಉಪ್ಪಿಲ್ಲದೂಟ ಸಪ್ಪೆ ಕಾಣಿರಣ್ಣ" ಇತ್ಯಾದಿ ಹೇಳಿರುವುದು ಗಮನಾರ್ಹ. ಅವರು ತಮ್ಮ ವಿಚಾರಧಾರೆಯನ್ನು ಕಿನ್ನರಿ, ವೀಣೆ, ದಂಡಿಗೆ, ತಾಳ ಮುಂತಾದುವುಗಳ ಹಿಮ್ಮೇಳದಲ್ಲಿ ತಮ್ಮ ವಚನಗಳ ಮೂಲಕ ಹಾಡುತ್ತಿದ್ದರು. ಹೀಗೆ ಶಿವಶರಣರ ಹಾಡಿನ ಪ್ರಕಾರದ ಸಾಹಿತ್ಯ ಪರಂಪರೆ ಬಹಳ ಹಿಂದೆಯೇ ಕನ್ನಡ ನಾಡಿನಲ್ಲಿ ಬೆಳೆಯಿತು.

ವಚನಕಾರರ ನಂತರ ಹರಿದಾಸರು ಕನ್ನಡದಲ್ಲಿ ನಾನಾ ಪ್ರಕಾರಗಳನ್ನು ರಚಿಸಿ, ಸಂಗೀತದ ಮಾಧ್ಯಮದ ಮೂಲಕ ಅವುಗಳನ್ನು ಹಾಡಿ, ಕ್ಷೇತ್ರಾಟನೆ ಮಾಡಿ ಭಕ್ತಿ ವಾಹಿನಿಯನ್ನು ಪ್ರವಹಿಸಿದರು. ಕನ್ನಡ ಸಾಹಿತ್ಯದಲ್ಲಿ ವಚನಸಾಹಿತ್ಯಕ್ಕಿರುವಂತೆ ಹರಿದಾಸ ಸಾಹಿತ್ಯಕ್ಕೆ ವಿಶೇಷಸ್ಥಾನವಿದೆ. ಪದಗಳ ನಡೆ, ತಾಳಗತಿ, ನರ್ತನ ದೃಷ್ಟಿಯಿಂದ ಲಕ್ಷ್ಯ ವೈವಿಧ್ಯ ಪ್ರಾಸ, ಅಲಂಕಾರ, ಸಾಮಾಜಿಕ ದೃಷ್ಟಿ, ವೇದೋಪನಿಷತ್ತುಗಳ ತತ್ವಸಾರ ಇವೆಲ್ಲವೂ ಇರುವ ಈ ಸಾಹಿತ್ಯವು ತನ್ನದೇ ಆದ ಪ್ರತಿಭೆಯಿಂದ ಪ್ರಕಾಶಿಸುತ್ತಿದೆ. ಇದನ್ನು ಸೃಷ್ಟಿಸಿದ ಹರಿದಾಸರಿಗೆ ಜಾತಿ, ಮತ, ಕುಲ, ಗೋತ್ರ, ವೃತ್ತಿ, ಲಿಂಗಭೇದಗಳಾವುವೂ ಇರಲಿಲ್ಲ.

ಆಳ್ವಾರರಂತೆ ಇವರು ದೈವಭಕ್ತಿಯಲ್ಲಿ ಮುಳುಗಿದ್ದ ಅನುಭಾವಿಗಳು. ಇವರಲ್ಲಿ ಹೆಚ್ಚಿನವರು ಮಾಧ್ವಸಂಪ್ರದಾಯದವರು. ಬೇಲೂರು ವೈಕುಂಠದಾಸರು ಶ್ರೀ ವೈಷ್ಣವರು, ಕನಕದಾಸರು ಕುರುಬರು. ಆದರೆ ಇವರೆಲ್ಲರೂ ಒಂದೇ ಭಾಗವತ ಧರ್ಮದ ನೆರಳಿನಲ್ಲಿ ಉಚ್ಚನೀಚಗಳೆಂಬ ಭಾವನೆಗಳಿಗೆ ಎಡೆ ಇಲ್ಲ.

ವಿಪ್ರಾತ್ ದ್ವಿಷಡ್ಗುಣ
ಯುತಾದರವಿಂದನಾಭ
ಪಾದಾರವಿಂದ ವಿಮುಖಾತ್
ಶ್ವಪಚಂ ವರಿಷ್ಠಂ

ಸಕಲ ಗುಣ ಪೂರ್ಣನಾಗಿದ್ದು ಭಗವಂತನಲ್ಲಿ ಭಕ್ತಿಯಿಲ್ಲದ ಬ್ರಾಹ್ಮಣನಿಗಿಂತ ಯಾವ ಶಾಸ್ತ್ರಪಾಂಡಿ

ತ್ವವೂ ಇರದ ಶ್ವಪಚ ಭಕ್ತನೇ ಶ್ರೇಷ್ಠ (ಭಾಗವತ). ಶ್ರೀವೈಷ್ಣವ ಆಚಾರ್ಯರು ಪದೇ ಪದೇ ಪದ್ಮಪುರಾಣದ ಈ ಶ್ಲೋಕವನ್ನು ಉದಾಹರಿಸುತ್ತಾರೆ --

ಶ್ವಪಚೋಽಪಿ ಮಹೀಪಾಲ
ವಿಷ್ಣು ಭಕ್ತಾದ್ವಿಜಾಧಿಕಃ
ವಿಷ್ಣುಭಕ್ತಿ ವಿಹೀನಸ್ತು

ಯತಿಶ್ಚ ಶ್ವಪಚಾ ಧರ್ಮಃ

'ಭಗವದ್ಭಕ್ತಿಯಿಲ್ಲದವನು ಯತಿಯಾದ ಬ್ರಾಹ್ಮಣನಾದರೂ ಅವನೇ ನಿಜವಾದ ಶ್ವಪಚ'. ಆಳ್ವಾರರೊಬ್ಬರು 'ಕುಲಂ ತರುಮ್ ಶೆಲ್ವಂ ತಂದಿಡುಮ್' ಅಂದರೆ ಭಗವದ್ಭಕ್ತಿಯು ಕುಲವಿಲ್ಲದವನಿಗೆ ಕುಲವನ್ನೂ, ಸಿರಿಯಿಲ್ಲದವನಿಗೆ ಸಿರಿಯನ್ನೂ ತಂದು ಕೊಡುತ್ತದೆ ಎಂದಿದ್ದಾರೆ. ಭಾಗವತ ಧರ್ಮದಲ್ಲಿ ಭಕ್ತಿಗೆ ಮುಖ್ಯಸ್ಥಾನವೇ ವಿನಹಾ ಕುಲಗಳಿಗಲ್ಲ. ಈ ಧರ್ಮವು ವರ್ಣಾತೀತವಾದ ಒಂದು ಮಾನದಂಡವನ್ನು ಆಶ್ರಯಿಸಿದೆ.

ಕರ್ಮಾವಲಂಬಿತಾಃ ಕೇಚಿತ್,
ಕೇಚಿತ್ ಜ್ಞಾನಾವಲಂಬಿತಾಃ
ವಯಂತು ಹರಿದಾಸಾನಾಂ
ಪಾದರಕ್ಷಾವಲಂಬಿತಾಃ

'ಕೆಲವರು ಕರ್ಮಮಾರ್ಗವನ್ನು ಅವಲಂಬಿಸಿದ್ದಾರೆ. ಕೆಲವರು ಜ್ಞಾನಮಾರ್ಗವನ್ನು ಆಶ್ರಯಿಸಿದ್ದಾರೆ. ನಾವು ಮಾತ್ರ ಹರಿದಾಸರ ಪಾದರಕ್ಷೆಗಳನ್ನು ಅವಲಂಬಿಸಿ ಇವರ ಸೇವೆಯಿಂದಲೇ ಬದುಕುವವರು' ಎಂದು ಧೀರಭಾವದಿಂದ ಪ್ರಸಿದ್ಧ ಆಚಾರ್ಯರಾದ ವೇದಾಂತದೇಶಿಕರು ಹೇಳಿರುವುದು ಗಮನಾರ್ಹ. ಭಗವಂತನನ್ನು ಸ್ವಾಮಿ ಎಂದು ಮನಸಾರ ಒಪ್ಪಿ, ತಮ್ಮನ್ನು ದಾಸ್ಯಭಾವದಲ್ಲಿ ಅವನಿಗೆ ಅರ್ಪಿಸಿಕೊಂಡವರೆಲ್ಲ ಹರಿದಾಸರೇ.

ದಾಸಸಾಹಿತ್ಯವು ಸುಮಾರು ೯ ನೇ ಶತಮಾನದಲ್ಲಿ ಉಗಮವಾಯಿತು ಮತ್ತು ಸು. ಕ್ರಿ.ಶ. ೮೭೯ ರಲ್ಲಿದ್ದ ಅಚಲಾನಂದರು ದಾಸಸಾಹಿತ್ಯ ರಚನಕಾರರಲ್ಲಿ ಆದ್ಯರು ಎಂದು ಬೇಲೂರು ಕೇಶವದಾಸರು ಹೇಳಿದ್ದಾರೆ. ಆದರೆ ಆ ಚಲಾನಂದರೆಂಬುವರು ಬೇರೊಬ್ಬರು. ಇವರು ಹೊಯ್ಸಳ ಕರ್ನಾಟಕರು. ಬೇಲೂರಿನವರು. ಮೇಲಿನ ಅಚಲಾನಂದರಿಗಿಂತ ಈಚೆನವರು. ಆದ್ಯರು ಎನಿಸಿಕೊಂಡ ೬೩ ಜನ ಮಾಧ್ವಯತಿಗಳು ಮತ್ತು ಗೃಹಸ್ಥರು ಸು. ೧೫-೧೬ ನೇ ಶತಮಾನದ ಕಾಲದಲ್ಲಿದ್ದರು ಎಂದು ಖ್ಯಾತ ಸಂಗೀತಶಾಸ್ತ್ರ ವಿದ್ವಾಂಸರಾದ ಡಾ|| ರಾ. ಸತ್ಯನಾರಾಯಣರು ಹೇಳಿದ್ದಾರೆ. ಶ್ರೀಮಧ್ವಾಚಾರ್ಯರ ಪೀಠವನ್ನಲಂಕರಿಸಿದ ಶ್ರೀ ನರಹರಿತೀರ್ಥರು (ಕ್ರಿ.ಶ. ೧೨೦೫--೧೨೧೪) ಭಾಗವತ ಧರ್ಮ ಪ್ರಚಾರಕ್ಕಾಗಿ ಅನೇಕ ಕನ್ನಡದೇವರ ನಾಮಗಳನ್ನು ರಚಿಸಿದರು. ರಘುಪತಿ ಎಂಬ ಅಂಕಿತದಲ್ಲಿರುವ ಅವರ ಮೂರು ಹಾಡುಗಳು ಮಾತ್ರ ದೊರಕಿವೆ. ಮತ್ತೆ ಹರಿದಾಸಸಾಹಿತ್ಯವು ಪುನರುಜ್ಜೀವನಗೊಂಡದ್ದು ಶ್ರೀಪಾದರಾಜಸ್ವಾಮಿಗಳ ಕಾಲದಲ್ಲಿ (೧೪೦೪--೧೫೦೩). ಇವರು ಶ್ರೀರಂಗ ಕ್ಷೇತ್ರದಲ್ಲಿ ಹಲವು ವರ್ಷಗಳಕಾಲ ವಾಸವಾಗಿದ್ದರು. ಅಲ್ಲಿ ತಿರುವಾಯಿಮೊಳಿಯಿಂದ ಹರಿಭಕ್ತಿ ಪ್ರಚಾರವಾಗುತ್ತಿದ್ದುದನ್ನು ಕಂಡರು. ಅದರಿಂದ ಅವರಲ್ಲಿ ಸಹಜವಾಗಿದ್ದ ಸ್ವತಂತ್ರ ಪ್ರತಿಭೆಗೆ ವಿಶಿಷ್ಟ ಚಾಲನೆ ದೊರೆತು ಕನ್ನಡ ಸಾರಸ್ವತ ಪ್ರಪಂಚವು ಸಮೃದ್ಧವಾಯಿತು. ಈ ಭಕ್ತಿ ಪರೀವಾಹ ಸಾಹಿತ್ಯವನ್ನು ತಮಿಳುನಾಡು ಕಾಪಾಡಿಕೊಂಡು ಬಂದರೀತಿಗೆ ಶ್ರೀಪಾದರಾಜರು ಮಾರುಹೋದರು. ಆ ಬಗೆಯ ಸಾಹಿತ್ಯವನ್ನು ರಚಿಸಿ ಪ್ರಚುರಪಡಿಸಿದರು.

ಉಗಾಭೋಗ, ವೃತ್ತನಾಮ, ದೇವರನಾಮ, ನರ್ತನಕ್ಕಾಗಿ ಪ್ರತ್ಯೇಕಸಾಹಿತ್ಯ ಭಜನೆಗಾಗಿ ಭ್ರಮರಗೀತೆ, ಸುಳಾದಿ ಇತ್ಯಾದಿ ವಿವಿಧ ಪ್ರಕಾರಗಳನ್ನು ರಚಿಸಿರುವರು. ವೇಣುಗೀತ, ಗೋಪಿಗೀತ, ದಂಡಕ (ಉದ್ದಂಡ) ಲಕ್ಷ್ಮೀನಾರಾಯಣ ಪ್ರಾದುರ್ಭಾವವು ನರಸಿಂಹಾವತಾರಕ್ಕೆ ಸಂಬಂಧಿಸಿದ್ದು. ಇದು ಕನ್ನಡದಲ್ಲಿನ ಒಂದೇ ಒಂದು ದಂಡಕವಾಗಿದ್ದು, ರಚನೆಯಲ್ಲಿ ಕನ್ನಡದ ಲಲಿತರಗಳೆಗೆ ಸಮೀಪವಾಗಿದೆ. ವೃತ್ತನಾಮವು ವೃತ್ತ ಮತ್ತು ನಾಮವನ್ನು ಒಂದು ಘಟಕವಾಗಿ ಉಳ್ಳ ರಚನೆ. ನಿಬದ್ಧ ಮತ್ತು ಅನಿಬದ್ಧಭಾಗಗಳು ಒಂದಾದಮೇಲೊಂದು ಬರುವ ರಚನೆ. ಸರ್ವಜ್ಞ ಸೋಮೇಶ್ವರನು ಹೇಳಿರುವಂತೆ ಇದು ಮಹಾಪ್ರಬಂಧ. ಇದನ್ನು ಒಂದೇರಾಗ ಮತ್ತು ತಾಳದಲ್ಲಿ ಅಥವಾ ರಾಗಮಾಲಿಕೆ ಮತ್ತು ತಾಳಮಾಲಿಕೆಯಾಗಿ ಹಾಡುತ್ತಿದ್ದರು. ಹರಿದಾಸಸಾಹಿತ್ಯದಲ್ಲಿ ವೃತ್ತನಾಮವು ಶ್ರೀಪಾದರಾಜರ ಸೃಷ್ಟಿ. ಇವರ ರಚನೆಗಳು ವಿಷಯ ವೈವಿಧ್ಯ ಮತ್ತು ರಚನಾಕೌಶಲ್ಯದ ದೃಷ್ಟಿಯಿಂದ ಗಮನಾರ್ಹವಾದುವು. ಇವು ಮುಂದಿನ ಎಲ್ಲಾ ವಾಗ್ಗೇಯಕಾರರಿಗೆ ಮಾರ್ಗದರ್ಶಿಯಾದುವು. ಇವರು ಕೃತಿಯ ಪಲ್ಲವಿ ಮತ್ತು ಚರಣಗಳ ಸ್ವರೂಪವನ್ನು ಖಚಿತವಾಗಿ ಸ್ಥಾಪಿಸಿದರು. ವಿಷಯದ ವೈವಿಧ್ಯದ ದೃಷ್ಟಿಯಿಂದ ಇವರು ಪದ ಅಥವಾ ಜಾವಳಿಯ ತಳಹದಿಯನ್ನು ಹಾಕಿದರು. ಉದಾ : ಗೋಪಿಗೀತ. ಇದಲ್ಲದೆ ಗೋಪಿಗೀತ ಮತ್ತು ಭ್ರಮರಗೀತವನ್ನು ಕೃತಿಯ ಚೌಕಟ್ಟಿನೊಳಗೆ ರಚಿಸಿರುವುದು ಗಮನಾರ್ಹ.

ಶ್ರೀಪಾದರಾಜರು ಮತ್ತೊಂದು ವಿಷಯದಲ್ಲಿ ಆದ್ಯಪ್ರವರ್ತಕರು ಎನ್ನಬಹುದು. ಜಾನಪದ

ಪತಿದಾಸರು, ಪ್ರಸನ್ನ ವೆಂಕಟದಾಸರು, ಹೆಳವನ ಕಟ್ಟೆ ಗಿರಿಯಮ್ಮ--ಮುಂತಾದವರಿಗೆ ಸ್ಫೂರ್ತಿದಾಯಕ ವಾಯಿತು. ನಾರದ ಕೊರವಂಜಿಯು ಒಂದು ಸುಂದರವಾದ ಕೊರವಂಜಿ ನಾಟಕವಾಗಿದ್ದು ಭರತ ನಾಟ್ಯ ಪ್ರದರ್ಶನಕ್ಕೆ ಬಹಳ ಯೋಗ್ಯವಾಗಿದೆ. ಭ್ರಮರಗೀತವೆಂಬುದು ಅವರೇ ಹೇಳಿರುವಂತೆ ನೂತನ ಪ್ರಕಾರವಾದುದು. ದಕ್ಷಿಣಭಾರತದ ಭಾಷೆಗಳಲ್ಲಿ ಇದೇ ಮೊದಲನೆಯದು. ಇದೊಂದು ಸಂಗೀತ ರೂಪಕ. ಗದ್ಯಭಾಗಗಳು, ಕೃತಿಗಳು ಮತ್ತು ಪದ್ಯಗಳಿದ್ದು ಕಥೆಯನ್ನು ತಡೆಯಿಲ್ಲದೆ ನಿರೂಪಿಸುತ್ತದೆ. ಇವರ ಸುಳಾದಿಗಳಲ್ಲಿ ಒಂದು ರಾಗತಾಳ ಮಾಲಿಕೆಯಿದೆ.

ಶ್ರೀ ವ್ಯಾಸರಾಯರ ಮತ್ತೊಬ್ಬ ಹರಿದಾಸ ಶ್ರೇಷ್ಠರಾದ ಶಿಷ್ಯರು ಪುರಂದರದಾಸರು. ಇವರ ಹೆಸರನ್ನು ಕೇಳಿದ ಕೂಡಲೇ ಇವರು ಕರ್ನಾಟಕ ಸಂಗೀತ ಪಿತಾಮಹರು. ಆಚಾರ್ಯ ಪುರುಷರು ಎಂದು ಸ್ಮರಣೆಗೆ ಬರುತ್ತದೆ. ಇವರು ಕರ್ನಾಟಕದವರಾಗಿದ್ದು ಅಗಣಿತ ಐಶ್ವರ್ಯವನ್ನು ತ್ಯಜಿಸಿ ಹರಿದಾಸರಾದುದು ಸರ್ವವಿದಿತ.

ದಾಸರು ಸಂಗೀತ ವಿದ್ವಾಂಸರಾಗಿದ್ದರು. ಇತರ ಶಾಸ್ತ್ರಗಳಲ್ಲಿ ಪಾಂಡಿತ್ಯವಿದ್ದಿತು. ಸಂಗೀತಕ್ಕೆ ಇವರ ಸೇವೆ ಅಪಾರ. ಗಾತ್ರ, ಗುಣ ಎರಡರಲ್ಲೂ ಇವರ ಕೃತಿಗಳದು ಗಿರಿತೂಕ. ಇವರ ಯತಿವರ್ಯರಾದ ಗುರುಗಳೇ ಇವರ ವ್ಯಕ್ತಿತ್ವಕ್ಕೆ ಮಾರುಹೋಗಿ ದಾಸರೆಂದರೆ ಪುರಂದರದಾಸರಯ್ಯ -- ಎಂದು ಪರಮ ತೃಪ್ತಿಯಿಂದ ಉದ್ಗಾರವೆತ್ತಿದ್ದಾರೆ. ಪುರಂದರದಾಸರ (೧೪೮೪--೧೫೬೪) ಉಗಾಭೋಗ, ಸುಳಾದಿ, ಗೀತೆಗಳಿಂದ ಅನೇಕ ಚರಣಗಳುಳ್ಳ ದೇವರ ನಾಮಗಳ ತನಕ ಎಣಿಸಿದರೆ ಇವರ ವಾಸುದೇವನ ನಾಮಾವಳಿಯುಎಂಬ ಹಾಡಿನಲ್ಲಿ ಹೇಳಿರುವಂತೆ ೪ ಲಕ್ಷ, ೭೫ ಸಾವಿರ. ದುರ್ದೈವದಿಂದ ಇವೆಲ್ಲವೂ ದೊರೆತಿಲ್ಲ. ಈಗ ದೊರೆತಿರುವುದು ಸುಮಾರು ೮೦೦ ರಿಂದ ೧೦೦೦ ರಚನೆಗಳು. ಸ್ವರ, ರಾಗ, ಲಯಗಳಿಗೆ ತಕ್ಕಂತೆ ಸಾಹಿತ್ಯಾಕ್ಷರಗಳನ್ನು ಜೋಡಿಸಿರುವ ಇವರ ಭಾಷೆ, ಅಲಂಕಾರ, ಪ್ರಾಸ ಮುಂತಾದ ಕಾವ್ಯ ಸಂಪತ್ತಿನಿಂದ ಕೂಡಿರುವ ಇವರ ರಚನೆಗಳು ಮನಮೋಹಕವಾಗಿ ಪುರಂದರೋಪನಿಷತ್ತು ಎನಿಸಿಕೊಂಡಿವೆ. ಸಂಗೀತ ಸಾಹಿತ್ಯದ ಸಾಮರಸ್ಯ ಗಾಯನ ನರ್ತನಗಳ ಮೋಹಕ ಗುಣಗಳು, ಗಹನ ತತ್ವಗಳು, ವೈಚಾರಿಕತೆ ಇವುಗಳಿಂದ ಕೂಡಿ ಮುಂದಿನವರಿಗೆ ಮಾರ್ಗದರ್ಶನವಾಗಿವೆ. ದಾಸರ ೧೯ ಹಾಡುಗಳು ಅನುವಾದಿಸಲ್ಪಟ್ಟು ಜರ್ಮನಿಯಲ್ಲಿ ಪ್ರಕಟವಾಗಿವೆ.

ಸಂಗೀತಕ್ಕೆ ದಾಸರಕೊಡುಗೆಯನ್ನು ತೋರಿಸಿಕೊಟ್ಟವರು ಮದ್ರಾಸಿನವರು. ೧೯೪೨ ರಲ್ಲಿ ಇದರ ಬಗ್ಗೆ ಪ್ರಕಟವಾಗಿರುವ ದೀರ್ಘ ಲೇಖನದ ಕೆಲವು ಭಾಗಗಳನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತ -- "ದೈವೀಸಂಪತ್ತು, ಕಲೆ, ಸಂಸ್ಕೃತಿ ಇವುಗಳೇ ಮೂರ್ತೀಭವಿಸಿ ಬಂತೆಂಬ ದೊಡ್ಡಸ್ತಿಕೆ ಪಡೆದವರಲ್ಲಿ ಅತ್ಯಂತ ದೊಡ್ಡವರೆನಿಸಿದವರು ಶ್ರೀ ಪುರಂದರದಾಸರು. ಇವರು ಎಲ್ಲವನ್ನೂ ತ್ಯಜಿಸಿ ಹರಿದಾಸರಾಗಿ ಮಾಡಿದ ತ್ಯಾಗವು ಅಸಾಧಾರಣವಾದದ್ದು. ಸಂಗೀತ ಶಾಸ್ತ್ರಕ್ಕೆ ಇವರು ಮಾಡಿದ ಅಪಾರಸೇವೆ ಅಮೋಘವಾಗಿರುವುದು. ಸಂಖ್ಯಾದೃಷ್ಟಿಯಿಂದ ಇತರ ಎಲ್ಲಾ ವಾಗ್ಗೇಯಕಾರರ ಕೃತಿಗಳನ್ನೂ ಕೂಡಿಸಿ ಹೋಲಿಸಿದರೆ ಪುರಂದರ ದಾಸರ ಕೃತಿಗಳ ಏಕಾಂಶ ಸಹ ಕಾಣುತ್ತಿಲ್ಲ.

ದಾಸರು ತಮ್ಮ ಉಪದೇಶವನ್ನು ಚಿತ್ತಾಕರ್ಷಕವಾದ ಆಪ್ಯಾಯಮಾನವಾದ ಮಧುರ ಸಂಗೀತದ ಮೂಲಕ ಜನತೆಯಲ್ಲಿ ಹರಡಿದರು. ತಾಯಿಯು ಹಾಡುತ್ತಿದ್ದ ಪುರಂದರದಾಸರ ದೇವರ ನಾಮಗಳನ್ನು ಕೇಳಿ ಶ್ರೀ ತ್ಯಾಗರಾಜರ ಮನಸ್ಸಿನ ಮೇಲಾದ ಪರಿಣಾಮವು ಅವರು ಅಷ್ಟುದೊಡ್ಡ ವಾಗ್ಗೇಯಕಾರರಾಗಲು ಕಾರಣವಾಯಿತೆಂಬುವುದಕ್ಕೆ ಬಲವತ್ತರ ಪ್ರಮಾಣಗಳಿವೆ.

ತಮ್ಮದೇ ಆದ ಹೊಸರೀತಿಯಲ್ಲಿ ಹಾಡಿದ ಮುತ್ತುಸ್ವಾಮಿ ದೀಕ್ಷಿತರು ಪುರಂದರದಾಸರ ಸುಳಾದಿಗಳ ತಾಳ ಕ್ರಮವನ್ನೂ ಕೀರ್ತನೆಗಳ ಶೈಲಿಯನ್ನೂ ಅನುಸರಿಸಿರುವುದು ಕಂಡುಬರುತ್ತದೆ.

ಪದಗಳನ್ನು ಹಾಡುವುದರಲ್ಲಿ ಪ್ರಖ್ಯಾತರಾದ ಕ್ಷೇತ್ರಜ್ಞ ಸಹ ಪುರಂದರದಾಸರ ಪದಗಳ ಮಾದರಿಯನ್ನು ಅನುಸರಿಸಿ ಹಾಡಿರುವುದು ಕಂಡುಬರುತ್ತದೆ.

ಕರ್ನಾಟಕ ಸಂಗೀತಕ್ಕೆ ಪುರಂದರದಾಸರು ತಂದೆಯ ಸ್ಥಾನದಲ್ಲಿರುವರು ಎಂಬುದು ಒಪ್ಪತಕ್ಕಮಾತು. ದಾಸರು ಪದಗಳನ್ನು ರಚಿಸಿ ಹಾಡಿದ ಕವಿಗಳು ಮಾತ್ರವಲ್ಲ. ಅವರು ಉತ್ತಮ ವರ್ಗದ ಲಕ್ಷಣಕಾರರು. ಈಗ ನಮ್ಮದೆಂದು ಹೆಸರಾಗಿರುವ ದಾಕ್ಷಿಣಾತ್ಯ ಸಂಗೀತ ಪದ್ಧತಿಯು ಸಂಪೂರ್ಣವಾಗಿ ಅವರ ಪ್ರಸಾದವಾಗಿರುತ್ತದೆ.

ಪುರಂದರದಾಸರು ಸಂಗೀತದ ಅಭ್ಯಾಸ ಕ್ರಮವನ್ನು ಬದಲಾಯಿಸಿ ಮಾಳವ ಗೌಳದ ಮೇಳದಿಂದ (ಮಲಹರಿ) ಪ್ರಾರಂಭಿಸಿದರು. ಷಡ್ಜ, ಮಧ್ಯಮ, ಪಂಚಮಗಳಿಗೆ ನಾಲ್ಕು ನಾಲ್ಕು ಶ್ರುತಿಗಳ ಅಂತರವಿರುವ ಖರಹರಪ್ರಿಯ ರಾಗದಿಂದ ಅಭ್ಯಾಸಮಾಡುವುದು ಪೂರ್ವ ಪದ್ಧತಿಯಾಗಿತ್ತು. ಪುರಂದರದಾಸರಾದರೋ ಭರತನ ಧ್ಯೇಯದಲ್ಲಿ ದೃಷ್ಟಿಯಿಟ್ಟು ಅದೇ ಕ್ರಮದಲ್ಲಿ ಶ್ರುತಿಗಳಿಗೆ ಸ್ವರಗಳನ್ನಿಟ್ಟು ಚತುಃಶ್ರುತಿಗೆ ಬದಲಾಗಿ ದ್ವಿಶ್ರುತಿಗಳ ಅಂತರವಿರುವ ಸೌಲಭ್ಯವನ್ನು ಮಾಳವಗೌಳ ಜನ್ಯ ಮಲಹರಿಯಿಂದ ಪಾಠಕ್ರಮವನ್ನು ಆರಂಭಿಸಿದರು. ಎಲ್ಲ ಬಗೆಯ ತೊಡಕುಗಳನ್ನೂ ನಿವಾರಿಸಿ ಜ್ಞಾನ ಉಂಟುಮಾಡುವ ಸ್ವರ, ತಾಳ, ಪ್ರಸ್ತಾರಗಳನ್ನೊಳಗೊಂಡ, ಕರ್ನಾಟಕ ಸಂಗೀತದಲ್ಲಿ ನೈಪುಣ್ಯವನ್ನು ಪಡೆಯಲು ಕಾರಣವಾಗಿರುವ ಸ್ವರಾವಳಿಗಳು, ಜಂಟಿಸ್ವರಗಳು, ಅಲಂಕಾರಗಳು, ಗೀತೆ ಮೊದಲಾದುವುಗಳೇ ಈ ಪಾಠಪದ್ಧತಿಯ ಕ್ರಮವು. ಬೇರೆ ಬೇರೆ ತಾಳಗಳಲ್ಲಿರುವ ಲಂಬೋದರ, ಕುಂದಗೌರ, ಕೆರೆಯನೀರನು, ಪದುಮನಾಭ ಎಂಬ ಮಲಹರಿ ರಾಗದ ಗೀತೆ ಪಿಳ್ಳಾರಿಗೀತೆಗಳೆಂದು ಪ್ರಸಿದ್ಧ. ಇವು ಒಂದೇ ಸುಳಾದಿಯ ಬೇರೆ ಬೇರೆ ನುಡಿಗಳಾಗಿದ್ದಿರಬಹುದು.

ಭಾಂಡೀರಭಾಷೆಯ ಭಯಸಮಯದೇವ (ದೇಶಾಕ್ಷಿರಾಗ), ಆನಲೇಕರ (ಶುದ್ಧಸಾವೇರಿ) ಎಂಬ ಗೀತಗಳೂ ಇವೆ. ದಾಸರು ರಚಿಸಿರುವ ಲಕ್ಷಣ ಗೀತೆಗಳು ದೊರೆತಿಲ್ಲ. ತಾನವರ್ಣಗಳನ್ನೂ ತಿಲ್ಲಾನಗಳನ್ನೂ ರಚಿಸಿದ್ದರೆಂದು ಹೇಳಲಾಗಿದ್ದರೂ ಅವು ಯಾವುವೂ ದೊರೆತಿಲ್ಲ.

ದಾಸರ ಬಹುಭಾಗ ಕೀರ್ತನೆಗಳು ಮಧ್ಯಮ ಕಾಲದಲ್ಲಿವೆ. ಎಲ್ಲ ಬಗೆಯ ತಾಳಗಳಿದ್ದರೂ ಛಾಪು, ಝುಂಪತಾಳಗಳೇ ಅವರಿಗೆ ಪ್ರಿಯವಾಗಿದ್ದ ತಾಳಗಳೆಂದು ಕಂಡುಬರುತ್ತದೆ. ಹಿಂದಿನವರಿಗಿಂತ ಆದಿತಾಳವನ್ನು ಹೆಚ್ಚಾಗಿ ಉಪಯೋಗಿಸಿದ್ದಾರೆ. ಈ ಭಾಗದಲ್ಲಿಯೂ ಪುರಂದರದಾಸರ ಮಾರ್ಗವನ್ನು ತ್ಯಾಗರಾಜರು ಅನುಸರಿಸಿರುತ್ತಾರೆ. ನಾಯಕ--ನಾಯಕೀ ಭಾವವನ್ನು ತೋರಿಸುವುದರಲ್ಲಿ ಭಾಷೆಯೊಂದರ ವಿನಾ ದಾಸರಿಗೂ ಕ್ಷೇತ್ರಜ್ಞನಿಗೂ ವ್ಯತ್ಯಾಸ ಕಂಡುಬರುವುದಿಲ್ಲ. ದಾಸರ ನಾಯಕ--ನಾಯಕೀ ಭಾವದ ಕೀರ್ತನೆಗಳು ಕ್ಷೇತ್ರಜ್ಞನಿಗೆ ಮಾದರಿಯಾಗಿದ್ದಂತೆ ಎಲ್ಲ ವಾಗ್ಗೇಯ ಕಾರರಿಗೂ ಮಾದರಿಯಾಗಿವೆ.

ಪುರಂದರದಾಸರ ಸಂಗೀತವಿದ್ಯಾಪ್ರೌಢಿಮೆಯನ್ನು ಪ್ರಕಟಿಸುವ ಕವಿತೆಗಳೆಂದರೆ ಸುಳಾದಿಗಳು. ಇವುಗಳ ನಡೆಯಾದರೂ ಕೀರ್ತನೆಗಳ ನಡೆಯಂತೆಯೇ ಇದ್ದು ಪಲ್ಲವಿ, ಅನುಪಲ್ಲವಿಗಳಿಂದ ರಹಿತವಾಗಿರುತ್ತದೆ. ಇದರಲ್ಲಿ ೭-೮ ಭಾಗಗಳಿದ್ದು ಪ್ರತಿ ಭಾಗಕ್ಕು ಪ್ರತ್ಯೇಕ ತಾಳಗಳು ಇರುತ್ತವೆ. ಕೆಲವು ಸುಳಾದಿಗಳ ಒಂದೊಂದು ತಾಳದ ಚರಣವನ್ನು ಒಂದೊಂದು

# ತಿರುಮಲೆಯಲ್ಲಿ ವಸತಿ

* ತಿರುಮಲೆಯಲ್ಲಿ ಯಾತ್ರಿಕರಿಗಾಗಿ ಉಚಿತವಾಗಿ ಸತ್ರಗಳಲ್ಲಿ ವಸತಿಯುಂಟು. ಇಲ್ಲಿನ ಕೋಣೆಗಳಲ್ಲಿ ವಿದ್ಯುತ್, ನೀರು ಸಹ ಉಚಿತವೇ. ಆದರೆ ಇವುಗಳಲ್ಲಿ ಮಂಚ, ಹಾಸಿಗೆ ಮುಂತಾದ ಅನುಕೂಲಗಳು ಇಲ್ಲ. ಇವುಗಳಲ್ಲಿ ವಸತಿ ಬೇಕಾದವರು ತಿರುಮಲೆಯ ಬಸ್ ನಿಲ್ಲುವ ಸ್ಥಳದ ಕೇಂದ್ರ ವಿಚಾರಣಾ ಕಚೇರಿಯಲ್ಲಿ ಕೇಳಿ ಪಡೆಯ ಬಹುದು.

* ಮಂಚ ಹಾಸಿಗೆ ಮತ್ತಿತರ ಸೌಕರ್ಯಗಳಿರುವ ಕೋಣೆಗಳು ಪಡೆಯಲು ತಿರುಮಲೆಯ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ ಅವರನ್ನು ವಿಚಾರಿಸಬೇಕು. ಅಥವಾ ಕನಿಷ್ಠ 30 ದಿನಗಳ ಮುಂಚೆ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ರೂ. 100-00 ಗಳ ಡಿ. ಡಿ.ಯನ್ನು ತೆಗೆದುಕೊಂಡು, ತಮಗೆ ವಸತಿ ಬೇಕಾದ ದಿನಾಂಕ, ತಿರುಮಲೆಗೆ ಎಷ್ಟು ಮಂದಿ ಬರುತ್ತಿರುವಿರಿ ಎಂಬ ವಿವರಗಳೊಡನೆ ಡಿ. ಡಿ.ಯನ್ನೂ, ವಿವರ ಪತ್ರವನ್ನೂ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್-1) ತಿರುಮಲೆ 517 504 ಇವರಿಗೆ ಕಳುಹಿಸಬೇಕು.

### ಬಾಡಿಗೆ (ಸೇವಾಶುಲ್ಕ) ಸಹಿತ ಕೋಣೆಗಳ ವಿವರ ಹೀಗಿದೆ.

| | ದಿನಕ್ಕೆ ಬಾಡಿಗೆ |
|---|---|
| 1. ಹಿಲ್‌ವ್ಯೂ (ಅರ್ಧಕಾಟೇಜು) ಶಂಕುಮಿಟ್ಟ | |
| ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ | ರೂ. 15/- |
| ಎಚ್.ವಿ.ಡಿ.ಸಿ. ಪ್ರತಿಕಾಟೇಜು (ಗೀಜರ್‌ನೊಂದಿಗೆ) | ರೂ. 50/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ದೊಡ್ಡವು | ರೂ. 30/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ಚಿಕ್ಕವು | ರೂ. 25/- |
| (ಮೊದಲೇ ರಿಸರ್ವ್ ಮಾಡಿಸಬಹುದು) | |
| 2. ಮಂಗಳಬಾವಿ ಕಾಟೇಜುಗಳು ಟಿ.ಬಿ.ಸಿ. 3 ಸಾಲು ಹಿಂಬಾಗ | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ A, B. (ಪ್ರತಿಯೊಂದು) | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ C, D. (ಪ್ರತಿಯೊಂದು) | ರೂ. 60/- |
| ವಿ. ವಿ. ಸಿ. | ರೂ. 150/- |
| ಎಂ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 50/- |
| ಟಿ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. ಸೂಟ್‌ಗಳು | ರೂ. 15/- |
| 3. ಎಸ್.ವಿ.ಅತಿಥಿಗೃಹ, ಎಸ್.ವಿ.ಜಿ.ಎಚ್.-ಪ್ರತಿಸೂಟ್ | ರೂ. 100/- |
| ಆರ್. ಬಿ. ಜಿ. ಎಚ್; ಎಸ್. ಎನ್. ಜಿ. ಎಚ್. -- | ರೂ. 100/- |
| ಮೂಲೆ ಕೋಣೆಗಳು -- | ರೂ. 150/- |
| (ರಿಸರ್ವೇಷನ್ ಪದ್ಧತಿಯಿಲ್ಲ) | |
| 4. ಟ್ರಾವೆಲರ್ಸ್ ಬಂಗ್ಲೆ (ಒಳಗಿನ ಕಾಟೇಜು) | ರೂ. 150/- |
| ನಾರಾಯಣಗಿರಿ ಕಾಟೇಜುಗಳು | ರೂ. 350/- |
| ಎನ್.ಜಿ.ಸಿ. -- 5, 12,13, | ರೂ. 500/- |
| ಎಚ್. ಆರ್. ಜಿ. ಕಾಟೇಜು ಪ್ರತಿಭಾಗ -- ಎ.ಸಿ. | ರೂ. 400/- |
| 5. ಮೋದಿಭವನ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀ ನಿಕೇತನ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಇಂದಿರಾ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಬಾಲಕುಟೀರ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀನಿವಾಸ ನಿಲಯ, ಪ್ರತಿಸೂಟ್ -- ಎ.ಸಿ. | ರೂ. 500/- |
| ಶ್ರೀಲಕ್ಷ್ಮೀನಿಲಯಂ, ಪ್ರತಿಸೂಟ್ -- ಎ.ಸಿ. | ರೂ. 500/- |
| ಗೋದಾವರಿಸದನ್, ಪ್ರತಿಸೂಟ್ -- ಎ.ಸಿ. | ರೂ. 500/- |
| ಗಾಂಬಲ್ ಅತಿಥಿಗೃಹ | ರೂ. 250/- |
| ಪದ್ಮಾವತೀ ಅತಿಥಿಗೃಹ (ಮಾಸ್ಟರ್‌ಸೂಟ್) | ರೂ. 1500/- |
| ಪದ್ಮಾವತೀ ಅತಿಥಿಗೃಹ ಇತರ -- ಪ್ರತಿಸೂಟ್ | ರೂ. 500/- |
| ವಿದ್ಯಾಸದನ್ ಮಾಸ್ಟರ್ ಸೂಟ್ | ರೂ. 1500/- |
| ವಿದ್ಯಾಸದನ್ ಇತರ -- ಪ್ರತಿಸೂಟ್ | ರೂ. 500/- |
| ಗೋಕುಲಂ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 1000/- |
| ರಿಸರ್ವೇಷನ್ ಇಲ್ಲ. ಅವಕಾಶವಿದ್ದಂತೆ ನೀಡಲಾಗುವುದು. | |
| 6. ಮದುವೆ ಮಂಟಪಗಳು -- ಬೆಳಗ್ಗೆ 8 ರಿಂದ 24 ಗಂಟೆ. | |
| ಶಂಕುಮಿಟ್ಟ ಕಾಟೇಜುಗಳು -- 272, 260, 266, 267, | ರೂ. 100/- |
| ಟಿ. ಬಿ. ಕಾಟೇಜುಗಳು 71, ಮೂರನೇಸಾಲು 136, 152 | ರೂ. 100/- |
| ರೂಯಾಕಾಟೇಜು, ಗೋಗಿನೇನಿ ಕಾಟೇಜು, ಎ.ಟಿ.ಸಿ. 99 | ರೂ. 100/- |
| ಚಿದಂಬರಂ ಚೆಟ್ಟಿಯಾರ್ ಕಾಟೇಜು | ರೂ. 100/- |
| ಶ್ರೀ ಸೀತಾರಾಮ ಕಲ್ಯಾಣ ಮಂಟಪ | ರೂ. 1000/- |

* ದಿನವೆಂದರೆ ವಸತಿ ನೀಡಿದ ಹೊತ್ತಿನಿಂದ 24 ಗಂಟೆಗಳು.
* ಕೇಳಿದ ವಸತಿ ಇಲ್ಲದಿದ್ದಲ್ಲಿ ಬೇರೆ ವಸತಿ ನೀಡಿ, ಹೆಚ್ಚಿನ ಹಣವನ್ನು (ಇದ್ದರೆ) ಹಿಂದಿರುಗಿಸಲಾಗುತ್ತದೆ.
* ಒಂದು ದಿನಕ್ಕೆ ಮಾತ್ರವೇ ರಿಸರ್ವೇಷನ್. ಅಂದು ಬರದಿದ್ದಲ್ಲಿ ಮೀಸಲಾತಿ ರದ್ದಾಗಿ, ಹಣವನ್ನು ಹಿಂದಿರುಗಿಸುವುದೂ ಮತ್ತೊಂದು ದಿನಕ್ಕೆ ಹೊಂದಿಸುವುದೂ ಇಲ್ಲ.
* ಅವಧಿ ಮೀರಿದ ಮೇಲೂ ವಸತಿಯಲ್ಲಿಯೇ ಇದ್ದಲ್ಲಿ ಮೂರು ಪಾಲು ಹೆಚ್ಚಿನ ಹಣದ ದಂಡ ವಸೂಲು ಮಾಡಲಾಗುವುದು.
* ಇಲ್ಲಿ ಸೂಚಿಸಲಾಗಿರುವ ಸೇವಾಶುಲ್ಕಗಳು ಬದಲಾವಣೆ ಆಗಬಹುದು.

### ತಿರುಪತಿಯಲ್ಲಿ ವಸತಿ

| | | |
|---|---|---|
| 1. | ಎಸ್. ವಿ. ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | ರೂ. 100/- |
| 2. | ಅಲಿಪಿರಿ ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | ರೂ. 75/- |
| 3. | ಮೊದಲ ಹೊಸಸತ್ರ --ಸಿಂಗಲ್ ರೂಂ -- | ರೂ. 50/- |
| | ಡಬಲ್ ರೂಂ -- | ರೂ. 100/- |
| | 4 ಹಾಸಿಗೆಯ ರೂಂ -- | ರೂ. 100/- |
| 4. | ಪದ್ಮಾವತೀ ಅತಿಥಿಗೃಹ (ಎ.ಸಿ.) | |
| | ಸಿಂಗಲ್ ರೂಂ -- 9, 10, | ರೂ. 100/- |
| | ಎರಡು ಹಾಸಿಗೆಯದು | ರೂ. 150/- |
| | ಎರಡು ಹಾಸಿಗೆ -- ಮೊಸಾಯಿಕ್ ರೂಂ (11,12,15,17) | ರೂ. 200/- |
| | ಎರಡು ಹಾಸಿಗೆ ಸೂಪರ್ ಮೊಸಾಯಿಕ್ ರೂಂ 16,18, | ರೂ. 250/- |

ಈ ದರಗಳು ಈಗ ಜಾರಿಯಲ್ಲಿವೆ.

ರಾಗದಲ್ಲೂ, ಮಿಕ್ಕವನ್ನು ಬೇರೆ ಬೇರೆ ತಾಳಗಳಲ್ಲಿ ಒಂದೇ ರಾಗದಲ್ಲಿ ಹಾಡುವ ರೂಢಿಯಿದೆ. ಸುಳಾದಿಯು ರಾಗದ ಸಂಚಾರವನ್ನು ತೋರಿಸುವ ಪ್ರೌಢವಾದ ಸಾಹಿತ್ಯವಾಗಿದೆ. ತುಳಜೇಂದ್ರ ಮಹಾರಾಜನ ಸಂಗೀತ ಸಾರಾಮೃತದಲ್ಲಿ ವಿವರಿಸಿರುವ ರಾಗಗಳ ಲಕ್ಷಣಕ್ಕೆ ಪುರಂದರದಾಸರ ಸುಳಾದಿಗಳ ವಿವಿಧ ಪ್ರಯೋಗಗಳೇ ಆಧಾರವೆಂದು ಉಲ್ಲೇಖ ಮಾಡಿರುತ್ತಾನೆ.

ಉಗಾಭೋಗವೆಂಬ ಹೆಸರಿನ ಮತ್ತೊಂದು ಬಗೆಯ ಸಂಗೀತ ಸಾಹಿತ್ಯವನ್ನು ಪುರಂದರದಾಸರು ರಚಿಸಿರುತ್ತಾರೆ. ಉಗಾಭೋಗ ಗೀತೆಗಿಂತ ಸರಳ ತರಗತಿಯ ಸಂಗೀತ. ಹಾಡಿನಲ್ಲಿ ವೈವಿಧ್ಯವಿಲ್ಲದಂತೆ ಸರ್ವ ಲಘುಗತಿಯಲ್ಲಿ ಯಾವ ರಾಗದಲ್ಲಿ ಬೇಕಾದರೂ ಹಾಡಬಹುದು. ತಮ್ಮ ಗುರುಗಳಂತೆ ದಾಸರು ವೃತ್ತನಾಮಗಳನ್ನೂ ರಚಿಸಿರುತ್ತಾರೆ.

"ಯಾವ ನಿಧಿಯನ್ನು ಅನುಗ್ರಹರೂಪವಾಗಿ ನಮಗೆ ದಯಪಾಲಿಸಿರುವರೋ, ಅಂತಹ ನಿಧಿಯ ನಿರ್ಮಾತರು ಹಾಡಿದ್ದೇ ರಾಗ, ಹೇಳಿದ್ದೇ ಕವಿತೆ ಎಂಬಂತೆ ಸಹಸ್ರಗಟ್ಟಳೆ ಕೃತಿಗಳನ್ನು ರಚಿಸಿ ಮಾನವ ತತ್ವದ ಮುದ್ರೆಯೊತ್ತಿ ನಮಗೆ ಹೆಮ್ಮೆಯನ್ನುಂಟು ಮಾಡಿಕೊಟ್ಟಿರುವರೋ ಅಂಥ ಪುರಂದರದಾಸರ ಮಹೋಪಕಾರವನ್ನು ಮಾತುಗಳಿಂದ ವರ್ಣಿಸುವ ಬಗೆ ಹೇಗೆ? ಸಂಸ್ಕೃತ ಸಾಹಿತ್ಯಕ್ಕೆ ವಾಲ್ಮೀಕರು ಹೇಗೋ ಕರ್ನಾಟಕ ಸಂಗೀತಕ್ಕೆ ಪುರಂದರದಾಸರು ಹಾಗೆ ಎಂಬ ಗೌರವವನ್ನು ಪಡೆದಿರುವವರು ಪುರಂದರದಾಸರು. ಇಂಥ ಮಹಾಪುರುಷರನ್ನು ಲಕ್ಷಲಕ್ಷವರ್ಷಗಳಿಗೊಮ್ಮೆಪಡೆಯುವುದು ಕಾಲದ ಭಾಗ್ಯ ದೇಶದ ಭಾಗ್ಯ."

ಶ್ರೀಪಾದರಾಜರು ಉಗಾಭೋಗ ಮತ್ತು ಸುಳಾದಿಗಳೆಂಬ ರಚನೆಗಳ ಪ್ರವರ್ತಕರೆಂದು ಹೇಳುತ್ತಾರೆ. ಇವೆರಡಕ್ಕು ಹೆಚ್ಚು ಗಮನವಿತ್ತಿರುವವರು ದಾಸರು. ಉಗಾಭೋಗವು ಒಂದು ಕವಿತೆ, ಗೇಯ ಪ್ರಕಾರ, ಅನಿಬದ್ಧ ಸಾಕ್ಷರ ರಾಗಾಲಪ್ತಿ. ದೇವರ ನಾಮವನ್ನು ಹಾಡುವಮೊದಲು ಇದನ್ನು ಹಾಡುವುದು ರೂಢಿ. ಇದು ತಮಿಳಿನಲ್ಲಿರುವ ತನಿಯನ್ ಇದ್ದ ಹಾಗೆ. ಇವು ಬಹುಮಟ್ಟಿಗೆ ಶಿವಶರಣರ ವಚನಗಳ ರಚನೆಯನ್ನು ಹೋಲುತ್ತವೆ ಎಂಬುದು ಗಮನಾರ್ಹ. ತಾಳ್ಳಪಾಕಂ ಅಣ್ಣಮಾಚಾರ್ಯರು ರಚಿಸಿದ ಮೊದಲನೆಯದಾದ ಸಂಸ್ಕೃತದಲ್ಲಿರುವ ಸುಳಾದಿ ತಿರುಪತಿ ದೇವಾಲಯದ ಒಂದು ಕೊಠಡಿಯಲ್ಲಿ ದೊರಕಿದೆ. ಇದು ಹಿಂದಿನ ಉದ್ಗ್ರಾಹ, ಆಭೋಗ ಇತ್ಯಾದಿ ರೀತಿಯಲ್ಲಿದ್ದು ವರಾಳಿರಾಗದಲ್ಲಿರುವುದಲ್ಲದೆ ಮಠ್ಯಾದಿತಾಳಗಳಲ್ಲಿದೆ. ಇದನ್ನು ಶಿಲಾಶಾಸನ ಒಂದರಲ್ಲಿ ಕೆತ್ತಲಾಗಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.

ಪುರಂದರದಾಸರು ರಾಗದ ನಿರ್ವಹಣೆಯಲ್ಲಿ ಸರಳವಾದ ದಾರಿ ಹಿಡಿದು ಯತಿ -- ಪ್ರಾಸ, ಧಾತು -- ಮಾತುಗಳ ಮೇಳನದ ಕಡೆಗೆ ಸಮಪ್ರಾಧಾನ್ಯ ಕೊಟ್ಟಿದ್ದಾರೆ. ಹರಿದಾಸರ ರಚನೆಗಳಲ್ಲಿ ಸಾಹಿತ್ಯವು ಮುಖ್ಯವಾದ ಭಾಗವೆಂಬುದನ್ನು ಮರೆಯಬಾರದು. ಪುರಂದರದಾಸರ ಹಾಡುಗಳಲ್ಲಿ ಅವರಿಗೆ ಸಂಗೀತ ಕಲೆಯಲ್ಲಿದ್ದ ಪ್ರೇಮ, ಪ್ರೌಢಿಮೆ, ಪರಿಶ್ರಮ, ಪ್ರಯೋಗಶೀಲತೆಗಳು ಕಾಣುತ್ತವೆ. ಅವರ ತಾಳ ಬೇಕು, ತಕ್ಕ ಮೇಳ ಮೇಳ ಬೇಕು ಎಂಬ ಮುಖಾರಿರಾಗದ ಕೃತಿಯಲ್ಲಿ ಸಂಗೀತದ ಪರಿಕರಗಳನ್ನು ತಿಳಿಸಿದ್ದಾರೆ.

ದಾಸರ ಕಾಲದಲ್ಲಿ ನೂರಾರು ರಾಗಗಳು ಗ್ರಂಥಸ್ಥವಾಗಿದ್ದುವು. ಅವುಗಳನ್ನು ವಿದ್ಯಾರಣ್ಯರು ಪ್ರಚುರ ಪ್ರಯೋಗದ ಒರೆಗಲ್ಲಿಗೆ ಹಚ್ಚಿ ೫೦ ರಾಗಗಳನ್ನು ನಿರ್ದೇಶಿಸಿದರು. ಬಸವಣ್ಣನವರ ಕಾಲದಿಂದ ಪುರಂದರದಾಸರ ಕಾಲದವರೆಗೆ ರೂಢಿಯಲ್ಲಿದ್ದ ಭಕ್ತಿ ಭಾವಕ್ಕೆ ನೆರವಾಗುವ ೩೨ ರಾಗಗಳನ್ನು ಅವರು 'ತುತ್ತೂರು ತೂರೆಂದು, ನಳಿನಜಾಂಡ ತಲೆಯ ತೂಗಿ, ಅಂಗನೆಯರೆಲ್ಲ ನೆರೆದು' ಎಂಬ ಹಾಡುಗಳಲ್ಲಿ ಉಲ್ಲೇಖಿಸಿದ್ದಾರೆ. ದಾಸರು ಜನರಲ್ಲಿ ಬಳಕೆಯಲ್ಲಿದ್ದ ರಾಗಗಳನ್ನು ಎತ್ತಿ ಹಿಡಿದರು. ನೃತ್ಯಕ್ಕೆ ಒದಗುವಂತೆ ಇರುವ 'ಆಡಿದನೋರಂಗ, ಕುಣಿದಾಡೋ ಕೃಷ್ಣ, ಹರಿಕುಣಿದ' ಇತ್ಯಾದಿಗಳನ್ನು ಸಾಂಪ್ರದಾಯಿಕ ನೃತ್ಯಪದ್ಧತಿಯನ್ನು ಅನುಸರಿಸಿ ರಚಿಸಿದರು. ಇವರ ಅನಂತಕೋಟಿ ಬ್ರಹ್ಮಾಂಡನಾಯಕ ಎಂಬ ದಂಡಕವು ೧೮೧ ದಿವ್ಯನಾಮಗಳುಳ್ಳ ನಾಮಾವಳಿ ಪ್ರಕಾರಕ್ಕೆ ಸೇರಿದ ರಚನೆ. ಭಗವದ್ಗೀತಾಸಾರ ಅಥವಾ ಹೃದಯಕಮಲವಿವರ ಮಾನಸಪೂಜೆ ಎಂಬ ಹೆಸರಿನ ಕೃತಿಯೂ ಇದೆ. ಪುರಂದರದಾಸರ ರಚನೆಗಳು ದಾಸಕೂಟದ ಬಾಯಿ ಪರಂಪರೆಯಿಂದ ಬಂದಿವೆ. ಹೀಗೆ ದಾಸರು ತಮ್ಮ ಗುರುವಿನ ಸ್ಫೂರ್ತಿಯಿಂದ ಲಕ್ಷ್ಯ ಲಕ್ಷಣಗಳ ಕಡೆಗೆ ಗಮನ ಹರಿಸಿದರು.



ಪುರಂದರದಾಸರು ರಚಿಸಿದ ಗೇಯಕೃತಿಗಳನ್ನು ಅವರ ಅನಂತರ ಸು. ೧೫೦ ವರ್ಷಗಳಾದಮೇಲೆ ಇದ್ದ ಪ್ರಸನ್ನ ವೆಂಕಟದಾಸರು 'ತಂದೆ ಪುರಂದರದಾಸರ ಸ್ಮರಿಸುವೆ' ಎಂಬ ಹಾಡಿನಲ್ಲಿ ಹೀಗೆ ಹೇಳಿದ್ದಾರೆ :--

ಗೀತಠಾಯಿ ಸುಳಾದ್ಯುಗಾಭೋಗ ಪದಪದ್ಯ
ವ್ರಾತ ಪ್ರಬಂಧ ರಚಿಸಿ ವಿಠ್ಠಲನ
ಪ್ರೀತಿ ಪಡಿಸಿ ಪ್ರತ್ಯಕ್ಷಕಂಡು ನಲಿದ ವೈಷ್ಣವಾಗ್ರ
ನಾಥ ಪ್ರಸನ್ನ ವೆಂಕಟ ಕೃಷ್ಣಪ್ರಿಯನ

ದಾಸರು ರಚಿಸಿರುವ ಠಾಯಗಳು ಹಾಗೆಯೇ ಲಕ್ಷಣಗೀತೆಗಳಾದಿ ಯಾವುವೂ ಲಭ್ಯವಿಲ್ಲದಿರುವುದು ನಮ್ಮ ದುರ್ದೈವ.

## ಕನಕದಾಸರು (1509 -- 1607 ಕ್ರಿ.ಶ.) :

ಪುರಂದರದಾಸರೊಡನೆ ಜೊತೆ ಜೊತೆಯಾಗಿದ್ದ ಮತ್ತೊಬ್ಬ ದಾಸಶ್ರೇಷ್ಠರು ಕನಕದಾಸರು. ದಾಸರಲ್ಲಿ ಇವರು ಕವಿಗಳು ಎಂಬ ಪ್ರಶಸ್ತಿಯಿದೆ. ಇವರ ಜೀವನ ಚರಿತ್ರೆಯು ಸರ್ವವಿದಿತ. ಆರಂಭದಿದಲೇ ಬಾಡದಾದಿಕೇಶವ, ಕಾಗಿನೆಲೆ ಆದಿಕೇಶವ ಎಂಬ ಅಂಕಿತವಿರುವ ಕನ್ನಡ ಹಾಡುಗಳನ್ನು ರಚಿಸುತ್ತಿದ್ದರು. ಆಗಿನ ಸಮಾಜದ ಕೆಳಗಿನ ಸ್ತರದಲ್ಲಿ ಹುಟ್ಟಿ ಗುಣಕರ್ಮಗಳಿಂದ ಶ್ರೇಷ್ಠ ಹರಿದಾಸರಾಗಿ ಸರ್ವಾದರಣೀಯರಾದರು.

ದಾಸರು ಮೊದಲು ಶ್ರೀರಾಮಾನುಜಾಚಾರ್ಯ ಪರಂಪರೆಯ ತಾತಾಚಾರ್ಯರ ಶಿಷ್ಯರಾಗಿದ್ದು, ರಾಮಾನುಜಾಚಾರ್ಯರನ್ನು ಪರಿಪೂರ್ಣ ಭಕ್ತಿಯಿಂದ 'ರಾಮಾನುಜರೇ ನಮೋ ನಮೋ' ಎಂದು

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್‌ರ ಸ್ಥೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸ ಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ದೆಳಗ್ಗೆ ೯ ಗಂಟೆಯಿಂದ ಸಂಜೆ ೭ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏಪ್ರಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

ತಿ. ತಿ. ದೇ.



ಹಾಡಿ ಸ್ಮರಿಸಿರುವವರು. ದಾಸರು ಹಂಪೆಗೆ ಬಂದ ಮೇಲೆ ಭಕ್ತಿಗೇ ಪ್ರಾಶಸ್ತ್ಯಕೊಟ್ಟ ಹರಿದಾಸರೊಡನೆ ಸೇರಿ ಶ್ರೀ ವ್ಯಾಸರಾಯರ ಶಿಷ್ಯರಾದರು. ಅವರು ಯಾವ ಮತವನ್ನೂ ತಿರಸ್ಕರಿಸಲಿಲ್ಲ. ವಿಷ್ಣು ಶಿವರಲ್ಲಿ ಭೇದವೆಣಿಸದೆ ಆತ್ಮಸಾಕ್ಷಾತ್ಕಾರ ಮಾಡಿಕೊಂಡರು. ಕಾವ್ಯಕ್ಷೇತ್ರ, ಆಧ್ಯಾತ್ಮಕ್ಷೇತ್ರ ಇವೆರಡರಲ್ಲೂ ಸಮಾನ ಖ್ಯಾತಿ ಪಡೆದ ಮಹಾನುಭಾವರು.

ಇವರು ಸಾಹಿತ್ಯ ವಿದ್ಯಾ ಸಂಸ್ಕಾರ ಪಡೆದಿದ್ದರು. ಕುಮಾರವ್ಯಾಸ, ಕುಮಾರವಾಲ್ಮೀಕಿ, ಸಾಹಿತ್ಯ ಲಕ್ಷಣ ಶಾಸ್ತ್ರ ಮತ್ತು ಪುರಾಣಗಳನ್ನು ಚೆನ್ನಾಗಿ ಬಲ್ಲವರು. ನಳಚರಿತ್ರೆ, ಮೋಹನ ತರಂಗಿಣಿ, ರಾಘವಧಾನ್ಯ ಚರಿತೆ (ರಾಮಾಧಾನ್ಯ) ಎಂಬ ಕಾವ್ಯಗಳು, ಹರಿಭಕ್ತಿಸಾರ, ನೃಸಿಂಹಸ್ತವ ಎಂಬ ಸ್ತೋತ್ರಗಳನ್ನು ರಚಿಸಿರುವರು.

ಇವರು ಹೆಚ್ಚಾಗಿ ಕೀರ್ತನೆಗಳನ್ನು ರಚಿಸಿಲ್ಲ. ಇವುಗಳಲ್ಲಿ ಮತತತ್ತ್ವ ಪ್ರತಿಪಾದನೆಗೆ ಮನಗೊಡದೆ ಏಕಾಂತ ಭಕ್ತಿಯನ್ನೂ, ಸರ್ವಾರ್ಪಣ ಮನೋಭಾವವನ್ನೂ, ಎಲ್ಲವೂ ಹರಿಚಾಲಿತ ಎಂಬ ತತ್ತ್ವವನ್ನಲ್ಲದೆ, ಜನತೆಯ ಮೌಢ್ಯ ಕಂದಾಚಾರ, ಪೊಳ್ಳು ನಂಬಿಕೆಗಳನ್ನು ಖಂಡಿಸಿ, ನವವಿಧ ಭಕ್ತಿಯನ್ನು ಪ್ರತಿಬಿಂಬಿಸಿದ್ದಾರೆ.

ಈಗ ದೊರೆತಿರುವ ಇವರ ಹಾಡುಗಳಲ್ಲಿ ಕಾಂಭೋಜಿ, ಮುಖಾರಿ, ಶಂಕರಾಭರಣ ಇತ್ಯಾದಿ ೩೦ ಕ್ಕು ಹೆಚ್ಚಿನ ರಾಗಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಇವರ ತಂಗದಿರನ ನಿಮಿಷತಾರಕೆಗಳು ಎಂಬ ಕೃತಿಯಲ್ಲಿ ಕೆಲವು ರಾಗಗಳ ಪ್ರಸ್ತಾಪಮಾಡಿದ್ದಾರೆ.

ತಾಳದಂಡಿಗೆ ಪಿಡಿದು
ತುಂಬುರು ನಾರದರು, ಭೂ
ಪಾಳಿ ದೇಶಾಕ್ಷಿ ನಾರಾಯಣಿ ಗುಜ್ಜರಿ
ಮಾಳವಿ ಶ್ರೀ ದೇವಗಾಂಧಾರಿ ಮಲಹರಿ
ಸಾಳಗವು ಸೌರಾಷ್ಟ್ರ ಗುಂಡಕ್ರಿಯಾ ಲಲಿತ
ಸುಳಾದಿಯಲಿ ನಾಮಕೀರ್ತನೆಗಳ ಪಾಡಿ
ಮೇಳೈಸಿ ವಾದ್ಯನೃತಗಳಾಡುತಿಹರು ಪಶು
ಪಾಲನೆ ಪವಡಿಸೋ ಹರಿಯೆ

ಗೇಯ ರಚನಾ ವೈವಿಧ್ಯದ ದೃಷ್ಟಿಯಿಂದ ಇವರ ಕೊಡುಗೆ ಇವರ ದೇವರ ನಾಮಗಳು. ನಮ್ಮಮ್ಮ ಶಾರದೆ, ತೊರೆದು ಜೀವಿಸಬಹುದೇ, ಏನೆಂದು ಕೊಂಡಾಡಿ ಸುಖಿಸಲೋ, ಈತನೀಗ ವಾಸುದೇವನು, ತಲ್ಲಣಿಸದಿರು, ಬಾಗಿಲನು ತೆರೆದು --ಮುಂತಾದುವು ಎಲ್ಲರ ಹೃನ್ಮನಗಳಲ್ಲಿ ಚಿರಸ್ಥಾಯಿಯಾಗಿವೆ.

ದಾಸರು ಆಗಿನ ಸಮಾಜದ ಒಂದು ಕೆಳಗಿನಸ್ತರದಿಂದ ಬಂದವರು. ಆದ್ದರಿಂದ ಇವರ ರಚನೆಗಳು ಪುರಂದರದಾಸರ ರಚನೆಗಳಂತೆ ಪ್ರಸಿದ್ಧವಾಗಲಿಲ್ಲ ಎನ್ನುವುದು ಅತಿರೇಕ. ದಾಸರು ತಮ್ಮನ್ನು ತಾವು ಹುಟ್ಟಿದ ಕೆಳಗಿನಸ್ತರಕ್ಕೆ ಸೀಮಿತಗೊಳಿಸಲಿಲ್ಲ. ಮೇಲಿನಸ್ತರದವರೆಗೂ ವ್ಯಾಪ್ತಿಯಿಟ್ಟು ಕೊಂಡಿದ್ದರು. ಕನಕದಾಸರಿಗೆ ಈಡಾಗಬಲ್ಲವರು ಲೋಕದಲ್ಲಿ ವಿರಳ ಎಂದು ಪುರಂದರದಾಸರು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು. ದಾಸರು ದ್ರೌಪದೀ ವಸ್ತ್ರಾಪಹರಣ (ಉದಯರಾಗ), ತಿರುಕನ ಕನಸು (ಭೋಗ ಷಟ್ಪದಿ) ಮುಂತಾದುವಲ್ಲದೆ ಮುಂಡಿಗೆಗಳನ್ನು ರಚಿಸಿ ದಾಸಸಾಹಿತ್ಯ ಹಾಗೂ ಕನ್ನಡಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

## ಬೇಲೂರು ವೈಕುಂಠದಾಸರು :

ವೈಕುಂಠದಾಸರು ಪುರಂದರ ದಾಸರ ಸಮಕಾಲೀನರಾಗಿದ್ದು ಶ್ರೀ ವೈಷ್ಣವ ಬ್ರಾಹ್ಮಣ ಮನೆತನದವರಾಗಿ ಬೇಲೂರಿನಲ್ಲಿ ಹುಟ್ಟಿ ಬೆಳೆದು ಅಲ್ಲೇ ವಾಸವಾಗಿದ್ದರು. ಚೆನ್ನಕೇಶವಸ್ವಾಮಿಯ ಪರಮ ಭಕ್ತರಾಗಿ ಭಗವತ್ಸಾಕ್ಷಾತ್ಕಾರವನ್ನು ಪಡೆದು ವೈಕುಂಠದಾಸರೆನಿಸಿಕೊಂಡರು. 'ವೈಕುಂಠ' ಎಂಬ ಅಂಕಿತದಲ್ಲಿ ದೇವರನಾಮಗಳನ್ನು ರಚಿಸಿರುವರು. ಇವೆಲ್ಲವೂ ಅತ್ಯಂತ ಭಕ್ತಿರಸ ಪ್ರಧಾನವಾಗಿವೆ. ಇವರಿಗೆ ಪಂಗನಾಮದ ತಿಮ್ಮಣ್ಣದಾಸರು ಎಂಬ ಹೆಸರೂ ವಾಡಿಕೆಯಲ್ಲಿದೆ. ಇವರು ವಾದಿರಾಜರು, ಕನಕದಾಸರು ಮತ್ತು ಪುರಂದರದಾಸರ ಆತ್ಮೀಯ ಮಿತ್ರರಾಗಿದ್ದರು.

## ನಂತರದ ಹರಿದಾಸರು :

ಪುರಂದರದಾಸರಿಗೆ ನಾಲ್ವರು ಮಕ್ಕಳು. ಅವರೆಲ್ಲರೂ ಹರಿದಾಸರಾದರೆಂದೂ ಹಿರಿಯ ಮಗ ವರದಪ್ಪನು ವರದ ಪುರಂದರ ಎಂಬ ಅಂಕಿತದಿಂದ ೨೨ ಹಾಡುಗಳನ್ನೂ, ಎರಡನೆಯವನಾದ ಗುರುರಾಯನು 'ಗುರುಪುರಂದರ' ಎಂಬ ಅಂಕಿತ ವಿರುವ ೩೨ ದೇವರನಾಮಗಳು, ೧೭ ಸುಳಾದಿಗಳು, ೧೨ ಉಗಾಭೋಗಗಳನ್ನೂ, ಮೂರನೆಯ ಮಗ ಅಪ್ಪಣ್ಣನು ಅಭಿನವಪುರಂದರ ಎಂಬ ಅಂಕಿತದಿಂದ ಒಂದು ಸುಳಾದಿಯನ್ನೂ, ನಾಲ್ಕನೆಯ ಪುತ್ರ ಮಧ್ವಪತಿಯು ತನ್ನ ಹೆಸರಿನ ಅಂಕಿತದಲ್ಲಿ ೧೦ ದೇವರ ನಾಮಗಳು ಮತ್ತು ಏಳು ಸುಳಾದಿಗಳನ್ನು ರಚಿಸಿರುವರೆಂದು ಹೇಳುತ್ತಾರೆ.

ಶ್ರೀ ವಾದಿರಾಜರು ಮತ್ತು ಪುರಂದರದಾಸರಂತೆ ಶ್ರೀ ವ್ಯಾಸರಾಯ ಶಿಷ್ಯರಾಗಿದ್ದ ಶ್ರೀ ವಿಜಯೀಂದ್ರತೀರ್ಥರು (೧೫೧೭--೧೫೯೫) ವಿಜಯೀಂದ್ರ ರಾಮ ಎಂಬ ಅಂಕಿತದಲ್ಲಿ ಕೆಲವು ಕನ್ನಡ ಹಾಡುಗಳನ್ನು ರಚಿಸಿರುವರು. ಪರದೊಮ್ಮೆ ಹರಿಯುತಾ, ಯಾಕೆಲೆ ಮನವೇ ಎಂಬುವು ಇವರು ರಚಿಸಿರುವ ಸುಳಾದಿಗಳು.

## ಶ್ರೀರಾಘವೇಂದ್ರತೀರ್ಥರು

ಮಂತ್ರಾಲಯದ ರಾಯರೆಂದೇ ಪ್ರಸಿದ್ಧರು. ಇವರು ಕೀರ್ತನೆಗಳನ್ನು ರಚಿಸಿ ಹಾಡಿ ದೇವರನ್ನು ಪೂಜಿಸುತ್ತಿದ್ದರು. ಧೀರವೇಣುಗೋಪಾಲ ಎಂಬ ಅಂಕಿತವಿರುವ 'ಇಂದು ಎನಗೆ ಗೋವಿಂದ' ಎಂಬ ಧೈರವಿರಾಗದ (ಝಾಪು) ಒಂದೇ ಒಂದು ದೇವರ ನಾಮ ದೊರಕಿದೆ.

## ಮಹೀಪತಿರಾಯರು

(೧೬೧೧--೧೬೮೧)

: ಬೆಳಗಾಂ ಜಿಲ್ಲೆಯ ಐಗಳಿಗ್ರಾಮದವರು. ಕನ್ನಡ ಉರ್ದು, ಪಾರ್ಸಿ ಭಾಷೆಗಳಲ್ಲಿ ಪಂಡಿತರಾಗಿದ್ದರು. ಬಿಜಾಪುರದ ಆದಿಲ್‌ಷಾಹನ ದಿವಾನರಾಗಿದ್ದರು. ನಂತರ ಯೋಗಿಯಾಗಿ ಕಾಖಂಡಿಕೆಯಲ್ಲಿ ನೆಲೆಸಿದರು. ಇವರು ಕೀರ್ತನಕಾರರಾಗಿದ್ದು ಸುಮಾರು ೬೮೦ಕ್ಕು ಹೆಚ್ಚು ದೇವರ ನಾಮಗಳನ್ನು ರಚಿಸಿದರು. ಇವುಗಳಲ್ಲಿರುವುದೆಲ್ಲ ಯೋಗದ ಅನುಭವಗಳು. ಶರಣರ ವಚನಗಳ ಧೋರಣೆಯನ್ನು ಇವರ ರಚನೆಗಳಲ್ಲಿ ಕಾಣಬಹುದು.

## ಪ್ರಸನ್ನ ವೆಂಕಟದಾಸರು (೧೬೭೪) :

ವಿಜಯದಾಸರ ಸಮಕಾಲೀನರು. ಬಾಗಲಕೋಟೆಯಲ್ಲಿ ನೆಲೆಸಿದ್ದರು. ತಿರುಪತಿ ವೆಂಕಟೇಶನ ಪರಮ ಭಕ್ತರಾಗಿದ್ದು ಪ್ರಸನ್ನ ವೆಂಕಟ ಎಂಬ ಅಂಕಿತದಲ್ಲಿ ಸುವ್ವಾಲೆ, ದೇವರನಾಮಗಳು ಮತ್ತು ಜೋಗುಳಗಳನ್ನು ರಚಿಸಿರುವರು. ಇವು ಪದ ಪ್ರೌಢಿಮೆ, ಅಲಂಕಾರ, ಪ್ರಾಸಗಳಿಂದ ಕೂಡಿ ದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ.

## ವಿಜಯದಾಸರು

ಪುರಂದರದಾಸರಾದ ಮೇಲೆ ಸುಮಾರು ೧೨೦ ವರ್ಷಗಳ ನಂತರ ಇದ್ದ ಇವರು ಪ್ರಸಿದ್ಧಹರಿದಾಸರು. ಇವರು ದಾಸಸಾಹಿತ್ಯದ ಎರಡನೆ ಯುಗದ ಮೂಲಪುರುಷರು. ರಾಯಚೂರು ಜಿಲ್ಲೆಯಚೀಕಲಪರಿವಿಗ್ರಾಮದವರು. ಪುರಂದರ ದಾಸರು ತಮ್ಮ ಗುರುಗಳೆಂದು ವ್ಯವಹರಿಸಿ ದಾಸರ ಪರಂಪರೆಯನ್ನು ಮುಂದುವರಿಸಿದರು. 'ವಿಜಯವಿಠಲ' ಎಂಬ ಅಂಕಿತದಲ್ಲಿ ೮೮೨ ಹಾಡುಗಳು ಮತ್ತು ೫೨೫ ಸುಳಾದಿಗಳನ್ನು ರಚಿಸಿರುವರು. ಇವರು ಗುರುಸ್ತೋತ್ರ, ಭಗವಂತನ ಸ್ತೋತ್ರ ಮುಂತಾದುವು ಬಹಳ ಪ್ರಸಿದ್ಧ. ಇವರಿಗೆ ಹಲವು ಪ್ರಸಿದ್ಧ ಶಿಷ್ಯರಿದ್ದರು.

## ಮೋಹನದಾಸರು :

ಮೋಹನವಿಠಲ ಎಂಬ ಅಂಕಿತದಲ್ಲಿ ಹಲವು ದೇವರ ನಾಮಗಳನ್ನೂ, ೨೧೭ ನುಡಿಯಿರುವ ಕೋಲು ಹಾಡನ್ನು ರಚಿಸಿದ್ದಾರೆ.

## ಗೋಪಾಲದಾಸರು (೧೭೨೨--೧೭೬೫) :

ವಿಜಯದಾಸರ ಒಬ್ಬ ಅತ್ಯಂತ ಪ್ರಸಿದ್ಧ ಶಿಷ್ಯರು. ರಾಯಚೂರು ಜಿಲ್ಲೆಯ ಮೊಸರು ಕಲ್ಲು ಗ್ರಾಮದವರು. ಇವರು ೨೩೩ ದೇವರ ನಾಮಗಳು ಮತ್ತು ೭೧ ಸುಳಾದಿಗಳನ್ನು ರಚಿಸಿರುವರು. ಇವೆಲ್ಲವೂ ಭಾವಗರ್ಭಿತವಾಗಿ ಪ್ರಮೇಯ ಪುಷ್ಟ ಮತ್ತು ಭಗವದ್ಭಕ್ತಿ ಪೂರ್ಣವಾಗಿ ಪ್ರಸಿದ್ಧವಾಗಿವೆ.

ಗೋಪಾಲದಾಸರ ಹಲವು ಶಿಷ್ಯರಲ್ಲಿ ಜಗನ್ನಾಥ ದಾಸರು (೧೭೨೭--೧೮೦೯) ಬಹಳ ಪ್ರಸಿದ್ಧರು. ಇವರು ಘನ ಪಂಡಿತರಾಗಿದ್ದು ನಂತರ ಹರಿದಾಸರಾದರು. ಇವರು ಮೊದಲು ವರದೇಂದ್ರರ ಶಿಷ್ಯರಾಗಿದ್ದು ನಂತರ ಮಾನವಿಯಲ್ಲಿ ಪಾಠಪ್ರವಚನ ಮಾಡಿಕೊಂಡಿದ್ದು ನಂತರ ಗೋಪಾಲದಾಸರ ಶಿಷ್ಯರಾಗಿ ಜಗನ್ನಾಥದಾಸರಾಗಿ ದಾಸಸಾಹಿತ್ಯದಲ್ಲಿ ಒಂದು ಹೊಸಯುಗದ ಪ್ರವರ್ತಕರಾದರು. ಹರಿಕಥಾಮೃತಸಾರ ಎಂಬುದು ಇವರ ಒಂದು ಅಪೂರ್ವಗ್ರಂಥ. ಇವರು ೨೨೫ ದೇವರ ನಾಮಗಳು, ೩ ಸುಳಾದಿಗಳು, ಹಲವು ಉಗಾಭೋಗಗಳು ಮತ್ತು ಸುದೀರ್ಘವಾದ ತತ್ವಸುವ್ವಾಲಿ ಎಂಬ ಕಾವ್ಯವನ್ನು ಜಗನ್ನಾಥವಿಠಲ ಎಂಬ ಅಂಕಿತದಲ್ಲಿ ರಚಿಸಿದ್ದಾರೆ.

ಜಗನ್ನಾಥರ ಹಿರಿಯ ಶಿಷ್ಯರಾದ ಪ್ರಾಣೇಶದಾಸರು ಪ್ರಾಣೇಶವಿಠಲ ಎಂಬ ಅಂಕಿತದಲ್ಲಿ ಗಾಲವಚರಿತ್ರೆ, ಕಾಲಿಯಮರ್ದನ ಕಥೆ, ಭ್ರಮರಗೀತ ಮುಂತಾದ ೧೭ ಕಥೆಗಳನ್ನೂ, ದೇವರ ನಾಮಗಳನ್ನೂ ರಚಿಸಿರುವರು. ಇವರು ಲಿಂಗಸುಗೂರಿನವರು.

ಜಗನ್ನಾಥ ದಾಸರ ಗುರುಗಳಾಗಿದ್ದ ವರದೇಂದ್ರ ಸ್ವಾಮಿಗಳು (೧೭೬೧--೧೭೮೫) ತಂತ್ರಸಾರವನ್ನು ೪೯ ನುಡಿಯ ಪದಗಳಲ್ಲಿ ರಚಿಸಿರುವರು. ಇದಲ್ಲದೆ ಹಲವು ದೇವರ ನಾಮಗಳನ್ನು ರಚಿಸಿರುವರು.

ಈ ಹರಿದಾಸರ ಪರಂಪರೆಗೆ ಸೇರಿ ಬಂದವರಲ್ಲಿ ಮತ್ತೊಬ್ಬ ಯತಿಗಳು ವ್ಯಾಸತತ್ವಜ್ಞತೀರ್ಥರು

(೧೭೦೪--೧೮೦೦). ಇವರು ಗೋಪಾಲದಾಸರ ಒಡನಾಡಿಗಳು. ವಾಸುದೇವ ವಿಠಲ ಎಂಬ ಅಂಕಿತದಲ್ಲಿ ಅನೇಕ ಪದ ಪದ್ಯಗಳನ್ನು ರಚಿಸಿರುವರು.

ಹರಿದಾಸ ಪರಂಪರೆಯಲ್ಲಿ ಹರಿಭಕ್ತೆಯಾಗಿದ್ದ ಹೆಳವನ ಕಟ್ಟೆ ಗಿರಿಯಮ್ಮನವರು ಎಲ್ಲರ ಹೃದಯವನ್ನು ಸೂರೆಗೊಂಡವರು. ಹುಟ್ಟೂರು ರಾಣಿಬೆನ್ನೂರು. ವಿಜಯದಾಸರ ಕಾಲದಲ್ಲಿದ್ದ ಮಹಾಭಕ್ತೆ. ಹೆಳವನ ಕಟ್ಟೆ ಗ್ರಾಮದ ರಂಗನಾಥ ದೇವರನ್ನು ಆರಾಧಿಸುತ್ತಿದ್ದು ಹೆಳವನಕಟ್ಟೆ ರಂಗ ಎಂಬ ಅಂಕಿತದಲ್ಲಿ ಅನೇಕ ದೇವರ ನಾಮಗಳನ್ನೂ, ಚಂದ್ರಹಾಸನ ಕಥೆ, ಕೃಷ್ಣಕೊರವಂಜಿ, ಬ್ರಹ್ಮಕೊರವಂಜಿ, ಲವಕುಶರಕಾಳಗ, ಸೀತಾಕಲ್ಯಾಣ ಮುಂತಾದುವನ್ನು ರಚಿಸಿರುವರು. ಇವು ಜನಪ್ರಿಯವಾಗಿವೆ. ಪಾರಿಜಾತ ಎಂಬ ಹೆಸರಿನ ೯ ಖಂಡಗಳಿರುವ ಇವರ ವೃತ್ತನಾಮವು ಬಹಳ ಪ್ರಸಿದ್ಧವಾಗಿದೆ. ಈಕೆಯು ಹರಿದಾಸ ಸಾಹಿತ್ಯದಲ್ಲಿ ದೊರೆಯುವ, ದೇವರನ್ನು ಮಗುವೆಂದು ಆಡಿಸಿದ ಸ್ತ್ರೀರತ್ನ.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ (೧೭೯೬--೧೮೬೮) ಚಿಕ್ಕನಾಯಕನ ಹಳ್ಳಿಯವರಾದ ತಿಮ್ಮಪ್ಪದಾಸರು ಒಬ್ಬ ಖ್ಯಾತ ಹರಿದಾಸರು. ಶೃಂಗೇರಿ ಮಠದ ಶಿಷ್ಯರಾಗಿದ್ದು ಭಾಗವತರಾಗಿದ್ದರು. ಹಲವು ಕೀರ್ತನೆಗಳು, ಶ್ರೀಕೃಷ್ಣನ ಬಾಲಲೀಲೆ ಎಂಬ ದೀರ್ಘಕಾವ್ಯ, ವೈರಾಗ್ಯ ಪರವಾದ ಕೀರ್ತನೆಗಳು, ಸಾಂಗತ್ಯ ಮತ್ತು ಕಂದ ಪದ್ಯಗಳನ್ನು ರಚಿಸಿದ್ದಾರೆ.

ಇದೇ ಕಾಲದಲ್ಲಿದ್ದ ಮತ್ತೊಬ್ಬ ಖ್ಯಾತ ಹರಿದಾಸರು ಸುರಪುರದ ಆನಂದದಾಸರು. ವೈಣಿಕರಾಗಿದ್ದುದಲ್ಲದೆ ಶಾಸ್ತ್ರ ಮತ್ತು ಸಂಗೀತದಲ್ಲಿ ಸಿದ್ಧಿ ಪಡೆದಿದ್ದರು. ಕಮಲೇಶ ವಿಠಲ ಎಂಬ ಅಂಕಿತದಲ್ಲಿ ಹಲವಾರು ದೇವರ ನಾಮಗಳನ್ನು ರಚಿಸಿದ್ದಾರೆ. ಕೃಷ್ಣರಾಜ ಒಡೆಯರು ಇವರ ೪೦ ಕೀರ್ತನೆಗಳನ್ನು ಕೇಳಿ ಇವರಿಗೆ ಕನಕಾಭಿಷೇಕವನ್ನು ಮಾಡಿ ಗೌರವಿಸಿದರು. ಆನಂದದಾಸರು ಭಗವದ್ಗೀತೆಯನ್ನು ಅನುಸರಿಸಿ ರಚಿಸಿರುವ ಕೀರ್ತನಗೀತೆ ಎಂಬ ಗ್ರಂಥವು ಕನ್ನಡಿಗರಿಗೆ ಗೀತೆಯ ಒಂದು ತಿಳಿಪಿಡಿ. ಇವರ ವಿಶ್ವರೂಪ ದರ್ಶನ ಎಂಬ ಕನ್ನಡದ ದಂಡಕವು ಶ್ರೀ ರಾಮಾನುಜಾಚಾರ್ಯರ ವೈಕುಂಠ ಗದ್ಯದಂತೆ ಬಹು ಸುಂದರವಾಗಿದೆ. ದಾಸರು ಭರತ ನಾಟ್ಯಕ್ಕೆ ಅನುಕೂಲವಾದ ನಾಯಕ -- ನಾಯಕೀ ಭಾವದಿಂದ ಕೂಡಿದ ಹಲವು ಜಾವಳಿಗಳನ್ನು ರಚಿಸಿದ್ದಾರೆ. ಇವರ ದೇವರ ನಾಮಗಳಲ್ಲಿ ಹಿಂದೂಸ್ಥಾನಿ ಮತ್ತು ಕರ್ನಾಟಕ ಸಂಗೀತ ಪದ್ಧತಿಗಳ ಸಾಮರಸ್ಯವು ಬಹುಚೆನ್ನಾಗಿ ಕಂಡುಬರುತ್ತದೆ. 'ಕಂಡು ಧನ್ಯನಾದೆನೋ ಉಡುಪಿ ಕೃಷ್ಣನ' ಎಂಬ ದೇಹಾಗ್‌ರಾಗದ ಇವರ ದೇವರ ನಾಮವು ಬಹು ಪ್ರಸಿದ್ಧವಾಗಿದೆ.

೧೮ ನೇ ಶತಮಾನದ ಸುಮಾರು ಮಧ್ಯದಿಂದ ೨೦ನೇ ಶತಮಾನದವರೆಗೆ ಕೃತಿರಚನೆ ಮಾಡಿದ ಹರಿದಾಸರಲ್ಲಿ ವೆಂಕಟವಿಠಲ, ವೈಕುಂಠಕೇಶವ, ಅಚ್ಯುತವಿಠಲ, ವಾಸುದೇವವಿಠಲ, ಭೀಮೇಶವಿಠಲ, ಜನಾರ್ದನವಿಠಲ, ಶ್ರೀಪತಿವಿಠಲ, ರಘುನಾಥವಿಠಲ, ಶ್ರೀವಿಠಲ ಪ್ರಸನ್ನ, ಅನಂತಾದ್ರೀಶ, ಅಭಿನವ ಜನಾರ್ಧನವಿಠಲ, ಅಚಲಾನಂದವಿಠಲ, ವೆಂಕಟೇಶ್ವರ ಮುಂತಾದವರು ಕರ್ನಾಟಕ ಸಂಗೀತದ ಪರಂಪರೆಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದವರು.

ಲಿಂಗಸುಗೂರಿನ ವರದೇಂದ್ರ ಸಾಹಿತ್ಯಮಂಡಲದವರು ಸುಮಾರು ೩೧೯ ಹರಿದಾಸರ ಪಟ್ಟಿಯನ್ನು ವಿವರ ಸಹಿತ ಸಿದ್ಧಗೊಳಿಸಿದ್ದಾರೆ.

ಶ್ರೀ ವ್ಯಾಸರಾಯರ ಶಿಷ್ಯಪರಂಪರೆಯಲ್ಲಿ ೧೬ನೆಯವರಾದ ವಿದ್ಯಾಕಾಂತರು ನಿರರ್ಗಳವಾದ ಧಾಟಿಯಲ್ಲಿ ದೇವರ ನಾಮಗಳನ್ನು ರಚಿಸಿರುವರು. ಮಂಗಳೂರಿನ ವೆಂಕಟರಮಣಾಚಾರ್ಯ (ತುಪಾಕಿ), ಸುಬ್ಬಣ್ಣಾಚಾರ್ಯ, ರಾಮಾಚಾರ್ಯ, ಬಾಗೇಪಲ್ಲಿಯ ಗುರುರಾಮವಿಠಲರೂ ದೇವರನಾಮಗಳನ್ನು ರಚಿಸಿರುವರು.

ಸೋಸಲೆ ವಿದ್ಯಾರತ್ನಾಕರ (ನರಹರಿವಿಠಲ) ಮತ್ತು ಶ್ರೀ ವ್ಯಾಸರಾಯ ಮಠಾಧೀಶರಾಗಿದ್ದ ಶ್ರೀ ವಿದ್ಯಾಪ್ರಸನ್ನ ತೀರ್ಥ ಇವರು ಮನೋಹರವಾದ ದೇವರ ನಾಮಗಳನ್ನು ರಚಿಸಿರುವರು.

ಹರಿದಾಸರ ರಚನೆಗಳಿಂದ ಸ್ಫೂರ್ತಿ ಪಡೆದು ಹಲವು ವಾಗ್ಗೇಯಕಾರರು ಅಂದರೆ ಸ್ವಾತಿತಿರುನಾಳ್ ಮಹಾರಾಜರು (ರಾಜೀವಾಕ್ಷ ಬಾರೋ -- ಶಂಕರಾಭರಣ), ಮೈಸೂರಿನ ರಾ. ಚಂದ್ರಶೇಖರಯ್ಯನವರು ಚಂದ್ರಶೇಖರ ಎಂಬ ಅಂಕಿತದಲ್ಲಿ, ವಿ. ರಾಮರತ್ನಂ ಅವರು ರಾಮ ಎಂಬ ಅಂಕಿತದಲ್ಲಿ, ಬಳ್ಳಾರಿ ಶೇಷಗಿರಿ ಆಚಾರ್ಯರು ವಿಶೇಷ ಎಂಬ ಅಂಕಿತದಲ್ಲಿ, ಬಿ. ಕೆ. ಪದ್ಮನಾಭರಾಯರು ಪದ್ಮನಾಭ ಎಂಬ ಅಂಕಿತದಲ್ಲಿ, ಆರ್. ಎನ್. ದೊರೆಸ್ವಾಮಿಯವರು ಲಕ್ಷ್ಮೀರಮಣ ಎಂಬ ಅಂಕಿತದಲ್ಲಿ, ಬೆಂಗಳೂರಿನ ಟಿ. ವಿ. ಮುತ್ತಾಚಾರ್ ಅವರು ಚಿದಾನಂದ ಎಂಬ ಅಂಕಿತದಲ್ಲೂ, ಪಂಡಿತ್ ಆರ್. ವಿ. ಶೇಷಾದ್ರಿಗವಾಯ್ ಅವರು ಹಿಂದೂಸ್ಥಾನೀ ರಾಗಗಳಲ್ಲಿ ಉರಗಾಚಲ ಎಂಬ ಅಂಕಿತದಲ್ಲೂ ಇಲ್ಲಿಯವರೆಗೆ ಅನೇಕ ದೇವರ ನಾಮಗಳನ್ನು ರಚಿಸಿದ್ದಾರೆ.

ಕರ್ನಾಟಕ ಸಂಗೀತ--ಸಾಹಿತ್ಯ ಭಂಡಾರಕ್ಕೆ ಹರಿದಾಸರ ಕೊಡುಗೆ ಅಪಾರ ಮತ್ತು ಮಹತ್ತರವಾದುದು.

(ಹಲವು ಮೂಲಗಳಿಂದ)





## ತಿರುಪತಿಯಲ್ಲಿ ಕಂಚಿ ಮಠಾಧಿಪತಿಗಳು

ಕಂಚಿಯ ಶ್ರೀ ಕಾಮಕೋಟಿ ಮಠದ ಪೀಠಾಧಿಪತಿಗಳಾಗಿ ಪಟ್ಟಾಭಿಷಿಕ್ತರಾದ ನಂತರ ಶ್ರೀ ಶ್ರೀ ಜಯೇಂದ್ರಸರಸ್ವತಿ ಸ್ವಾಮಿಗಳು ತಿರುಪತಿಗೆ ಆಗಮಿಸಿ ತಿರುಮಲೆಯ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಅವರೊಡನೆ ಕಂಚಿ ಮಠದ ಕಿರಿಯ ಶ್ರೀಪಾದಂಗಳು ಶ್ರೀ ಶ್ರೀ ವಿಜಯೇಂದ್ರ ಸರಸ್ವತಿ ಸ್ವಾಮಿಜೀಯುವರೂ ಬಂದಿದ್ದರು.

ಶ್ರೀಪಾದಂಗಳವರು ತಿರುಮಲೆಗೆ ಆಗಮಿಸಿದಾಗ ಅವರನ್ನು ಘನವಾಗಿ ಸ್ವಾಗತಿಸಲಾಯಿತು. ಬೇಡಿ ಆಂಜನೇಯ ಸ್ವಾಮಿಯ ಗುಡಿಯ ಬಳಿಯಲ್ಲಿ ಆಲಯಾರ್ಚಕರು ಸಂಪ್ರದಾಯ ಗೌರವದೊಡನೆ ಸ್ವಾಮಿ ಶಠಾರಿಯನ್ನು ತೆಗೆದುಕೊಂಡು ಬಂದು ಶ್ರೀಪಾದಂಗಳವರನ್ನು ಸ್ವಾಗತಿಸಿದರು. ತಿರುಮಲೆಯ ಆಲಯದ ಶಠಾರಿಸ್ವಾಗತವೆಂದರೆ ಸ್ವಾಮಿಯೇ ಹೊರಬಂದು ಸ್ವಾಗತಿಸಿದನೆಂಬುದರ ಸಂಕೇತ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ಸತ್ಯನಾರಾಯಣ ಮತ್ತಿತರ ಅಧಿಕಾರಿಗಳು ಸ್ವಾಮಿಗಳನ್ನು ಆಲಯದೊಳಕ್ಕೆ ಕರೆದೊಯ್ದರು.

ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ತಿರುಮಲೇಶನಿಗೆ ರೇಷ್ಮೆ ವಸ್ತ್ರವನ್ನು ನೀಡಿ ಪೂಜಿಸಿದರು. ಆ ವಸ್ತ್ರ ಒಂದು ದಿನ ಪೂರ್ತಿ ತಿರುಮಲೇಶನ ಬಳಿಯಲ್ಲೇ ಇಡಲಾಗಿದ್ದಿತು. ಇಪ್ಪತ್ತು ನಿಮಿಷ ಸ್ವಾಮಿಯ ಬಳಿಯಿದ್ದ ಅವರಿಗೆ ತಿ.ತಿ.ದೇ. ಗಳ ಪರವಾಗಿ ಸ್ವಾಮಿಯ ಮೇಲ್‌ಚಾತ್ ವಸ್ತ್ರವನ್ನು ಬಹೂಕರಿಸಲಾಯಿತು. ಶ್ರೀ ಶ್ರೀ ವಿಜಯೇಂದ್ರ ಸರಸ್ವತಿ ಸ್ವಾಮಿಗಳಿಗೆ ಪಂಚೆ, ಕೌಪೀನ, ಛತ್ರಗಳನ್ನು ನೀಡಿ ಗೌರವಿಸಲಾಯಿತು.

ಜನವರಿ 20 ರಂದು ಶುಕ್ರವಾರ ಬೆಳಗ್ಗೆ ಸ್ವಾಮಿಯ ಅಭಿಷೇಕದಲ್ಲಿ ಶ್ರೀಪಾದಂಗಳು ಪಾಲುಗೊಂಡರು. ಅವರೊಡನೆ ಲೋಕಸಭೆಯ ಅಧ್ಯಕ್ಷರು ಶ್ರೀ ಶಿವರಾಜಪಾಟೀಲರು ಸಹ ಸ್ವಾಮಿಯ ಅಭಿಷೇಕದಲ್ಲಿ ಪಾಲುಗೊಂಡರು. ಶ್ರೀ ಶ್ರೀ ವಿಜಯೇಂದ್ರಸರಸ್ವತಿ ಸ್ವಾಮಿಗಳು ಸ್ವಾಮಿಯ ಅರ್ಚನೆ, ತೋಮಾಲಸೇವೆಗಳಲ್ಲೂ ಪಾಲುಗೊಂಡರು. ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ಆಲಯದಲ್ಲಿ ಎರಡು ಗಂಟೆಗಳ ಕಾಲ ಧ್ಯಾನ ಮಗ್ನ ರಾಗಿದ್ದರು.

ಶ್ರೀಪಾದಂಗಳವರು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದ ಪಕ್ಕದ ತ್ಯಾಗರಾಜ ಮಂಟಪದಲ್ಲಿ ಬಿಡಾರ ಹೂಡಿದ್ದು ಭಕ್ತರನ್ನು ಸ್ವಾಗತಿಸಿ ಅನುಗ್ರಹಿಸಿದರು. ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯಕ್ಕೆ ಭೇಟಿ ನೀಡಿ ಶ್ರೀ ಗೋವಿಂದರಾಜಸ್ವಾಮಿಯನ್ನು ಆರಾಧಿಸಿದರು. ಇಲ್ಲಿಯೂ ಶ್ರೀಪಾದಂಗಳಿಗೆ ಆಲಯ ಸಂಪ್ರದಾಯದಂತೆ ಸ್ವಾಗತ ನೀಡಲಾಯಿತು.

# ವಾರ್ತಾಲಹರಿ



## ತಿ.ತಿ.ದೇ.ಗಳಿಗೆ ಎರಡನೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ

ದಿನ ದಿನವೂ ಬೆಳೆಯುತ್ತಿರುವ ತಿರುಮಲೆ ತಿರುಪತಿಗಳ ಆಡಳಿತಾವಸರಗಳಿಗೆ ತಾಳಮೇಳವಾಗಿ ಜವಾಬುದಾರಿಯನ್ನು ಹಂಚಿಕೊಳ್ಳಲು ಅನುಕೂಲವಾಗುವಂತೆ ಎರಡನೆಯ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಹುದ್ದೆಯನ್ನು ಮಂಜೂರುಮಾಡಿ ಒಬ್ಬ ಐ.ಎ.ಎಸ್. ಅಧಿಕಾರಿಯನ್ನು ಆಂಧ್ರಪ್ರದೇಶದ ಸರ್ಕಾರ ನೇಮಿಸಿದೆ.

ಈ ಮೊದಲು ವಿಶಾಖಪಟ್ಟಣದ ಸಂಯುಕ್ತ ಜಿಲ್ಲಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಪಿ. ಬಾಲಸುಬ್ರಹ್ಮಣ್ಯಂ ಅವರನ್ನು ಎರಡನೆಯ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಯೆಂದು ಹೆಸರಿಸಿದ ನಂತರ ಅವರು ವಿಶಾಖಪಟ್ಟಣದಿಂದ 25 ರಂದು ಮದರಾಸಿನ ಮೂಲಕ ತಿರುಪತಿಗೆ ಆಗಮಿಸಿ ಕಾಲುನಡಿಗೆಯಲ್ಲಿ ಬೆಟ್ಟವನ್ನು ಹತ್ತಿ ಅಲ್ಲಿಯೇ ರಾತ್ರಿ ಕಳೆದು 26 ರ ಬೆಳಗ್ಗೆ ಸ್ವಾಮಿಯ ಅಭಿಷೇಕದಲ್ಲಿ ಪಾಲುಗೊಂಡು ನಂತರ ತಮ್ಮ ಪದವಿ ಬಾಧ್ಯತೆಯನ್ನು ಸ್ವೀಕರಿಸಿದರು.

27 ರಂದು ಬೆಟ್ಟದ ಮೇಲಿನ ವಿವಿಧ ವಿಭಾಗಗಳನ್ನು ಸಂದರ್ಶಿಸಿ ತಿ.ತಿ.ದೇ. ಗಳ ಬಗ್ಗೆ ಮಾಹಿತಿಯನ್ನು ಪಡೆದರು. ವೈಕುಂಠಂ ಕ್ಯೂಕಾಂಪೆಕ್ಸ್, ಪಿ.ಪಿ. ಷೆಡ್ಸ್, ಲಾಡು ತಯಾರಿಕೆಯ ಅಡುಗೆ ಮನೆಗಳನ್ನು ಸಂದರ್ಶಿಸಿ ವಿವರಗಳನ್ನು ವ್ಯವಸ್ಥೆಗಳನ್ನು ತಿಳಿದನಂತರ, ಭಾನುವಾರದಂದು ಪಾಪನಾಶನಂ, ಗೋಗರ್ಭಂ, ಫಿಲ್ಟರ್ ಹೌಸ್ -- ಪ್ರಾಂತ್ಯಗಳನ್ನು ಸಂದರ್ಶಿಸಿದರು. ಅವರೊಡನೆ ತಿ.ತಿ.ದೇ. ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಅವರು ಇದ್ದರು.



## ರಸ ಪೂರ್ಣ ನಾಟಕ ಪ್ರದರ್ಶನ

ಫೆಬ್ರವರಿ 1ರಂದು ಸಂಜೆ ತಿರುಪತಿಯಅನ್ನಮಾಚಾರ್ಯ ಕಲಾಮಂದಿರದಲ್ಲಿ ಶ್ರೀನಿವಾಸ ಕಲ್ಯಾಣ ನಾಟಕವನ್ನು ತಿ.ತಿ.ದೇ. ಉದ್ಯೋಗಿಗಳ ನಾಟಕ ಮಂಡಳಿಯವರು ರಸವತ್ತರವಾಗಿ ನಡೆಸಿಕೊಟ್ಟರು.

ನಾಟಕದ ಆರಂಭದಲ್ಲಿ ಮುಖ್ಯ ಅತಿಥಿಯಾಗಿ ಆಗಮಿಸಿದ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಸಾಮಾಜಿಕ ಅಭಿವೃದ್ಧಿಯನ್ನು ಸಾಧಿಸಲು ನೈತಿಕ ಮೌಲ್ಯಗಳು ಹೆಚ್ಚಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸುತ್ತ ಪೌರಾಣಿಕ ನಾಟಕಗಳ ಪಾತ್ರ ಈ ದಿಸೆಯಲ್ಲಿ ಅರ್ಥಪೂರ್ಣವಾಗಬಲ್ಲದು ಎಂದು ತಿಳಿಸಿದರು. ನಾಟಕ ಮಂಡಳಿಯ ನಾಯಕರು ಶ್ರೀ ಸಿ. ರಮಣ, ಮೊದಲಾದವರು ಸಭೆಯಲ್ಲಿ ಪಾಲುಗೊಂಡರು.

ಶ್ರೀ ವೇದವ್ಯಾಸ ರಂಗಭಟ್ಟರ್ ಅವರು ಸಂಗೀತ ನೀಡಿ ನಿರ್ದೇಶಿಸಿದ ಶ್ರೀ ವಿ. ಸೂರ್ಯನಾರಾಯಣ ರಾವ್ ಕೃತ ಪೌರಾಣಿಕ ನಾಟಕ ಶ್ರೀನಿವಾಸ ಕಲ್ಯಾಣದಲ್ಲಿ ಸರ್ವಶ್ರೀ ಎ. ರಂಗಯ್ಯ, ಟಿ.ಕೆ.ಎಸ್. ರಾಜನ್, ಬಾಲಚಂದ್ರ, ಟಿ. ಶಿವಭಾಸ್ಕರರಾವ್, ಮೊದಲಾದವರೂ, ಶ್ರೀಮತಿಯರಾದ ಸಾಧನಾ ನಿರ್ಮಲ, ಶೋಭಾಮಾನ್ಯ ಮೊದಲಾದವರೂ ಪಾತ್ರವಹಿಸಿದ್ದರು.

ನಾಟಕ ತನ್ನ ಅಂತಃಸತ್ವದಿಂದಲೂ, ಪಾತ್ರಧಾರಿಗಳ ತನ್ಮಯದ ಭಾವಪೂರ್ಣ ಅಭಿನಯದಿಂದಲೂ, ಹೃದ್ಯ ಸಂಗೀತದಿಂದಲೂ, ಲವಲವಿಕೆಯ ನಿರ್ದೇಶನದಿಂದಲೂ ಕೂಡಿದ್ದು ಜನರನ್ನು ಆಕರ್ಷಿಸಿ ರಸದೌತಣ ನೀಡಿತೆಂದು ವರದಿಯಾಗಿದೆ.

## ಅನ್ನದಾನ ಯೋಜನೆಗೆ ಐದು ಲಕ್ಷ ವಂತಿಗೆ

ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಯೋಜನೆಗೆ ಐದು ಲಕ್ಷ ರೂಪಾಯಿಗಳ ವಂತಿಗೆ ಬಂದಿದೆ. ಮದರಾಸಿನ ಎಂ.ವಿ.ಆರ್. ಇಂಡಸ್ಟ್ರೀಸ್‌ನ ಎಂ.ವಿ. ರಾಜಾ ಅವರ ಹೆಸರಿನಲ್ಲಿ ಸಿಂಗಪುರದ ಮೌಂಟ್ ಅಂಡ್ ಮೌಂಟ್‌ನ ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀಮತಿ ವಿ.ಆರ್. ಉಷಾದೇವಿ ಅವರು ಐದು ಲಕ್ಷರೂಗಳ ಡಿ.ಡಿ. ಯನ್ನು ತಿರುಮಲೆಯ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಅವರಿಗೆ ಫೆಬ್ರವರಿ 1 ರಂದು ಬುಧವಾರ ನೀಡಿದ್ದಾರೆ.

## ಕಾರ್ವೇಟಿನಗರದಲ್ಲಿ ತಿ.ತಿ.ದೇ. ಕಲ್ಯಾಣಮಂಟಪ

ತಿರುಪತಿಯಿಂದ 55 ಕಿ.ಮೀ. ದೂರದಲ್ಲಿ ಪುತ್ತೂರು -- ಚಿತ್ತೂರು ಹಾದಿಯಲ್ಲಿರುವ ಕಾರ್ವೇಟಿನಗರ ಇತಿಹಾಸ ಪುರಾಣ ಪ್ರಸಿದ್ಧವಾಗಿದ್ದು ಅಲ್ಲಿನ ದೇವಾಲಯ ತಿ.ತಿ.ದೇ. ಆಡಳಿತ ಪರಿಧಿಗೆ ಸೇರಿದ್ದು. ಈಗ ಅಲ್ಲಿ ತಿ.ತಿ. ದೇ. ಕಲ್ಯಾಣಮಂಟಪವೂ ಉಂಟಾಗಿದೆ.

ಜನವರಿ 27 ರಂದು ಆಂಧ್ರಪ್ರದೇಶದ ಉನ್ನತ ಶಿಕ್ಷಣ ಇಲಾಖಾಸಚಿವ ಶ್ರೀ ಗಾಲಿ ಮುದ್ದುಕೃಷ್ಣಮ ನಾಯುಡು ಅವರು ಈ ಕಲ್ಯಾಣ ಮಂಟಪವನ್ನು ಉದ್ಘಾಟಿಸಿದರು. 21 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲಾಗಿರುವ ಈ ಕಲ್ಯಾಣಮಂಟಪದಲ್ಲಿ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಿರ್ವಹಿಸಬಹುದಾಗಿದ್ದು ಆರಂಭೋತ್ಸವ ನಡೆಸಿಕೊಡುತ್ತ ಮಂತ್ರಿಗಳು ತಿ.ತಿ.ದೇ. ಗಳ ಆಡಳಿತ ಯಾತ್ರಿಕೋಪಯೋಗಿಯಾಗಿ ಹೆಚ್ಚಿನ ಅಭಿವೃದ್ಧಿ ಪಡೆಯಲಿ ಎಂದು ಹಾರೈಸಿದರು.

ಆರಂಭೋತ್ಸವ ಸಭೆಯಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್, ಎಸ್.ವಿ.ವಿ.ವಿ. ಯ ಉಪಕುಲಪತಿ ಪ್ರೊ. ರಾಮಮೂರ್ತಿ, ಎಂ. ಎಲ್. ಎ. ಶ್ರೀ ದೊರೆಸ್ವಾಮಿರಾಜು, ಮೊದಲಾದ ಹಿರಿಯರು ಭಾಗವಹಿಸಿದ್ದರು.

## ತಿ. ತಿ. ದೇ. ವಿಶೇಷಾಡಳಿತ ಪ್ರಾಧಿಕಾರ

ಆಂಧ್ರಪ್ರದೇಶದ ಶಾಸನ ಸಭೆಯಲ್ಲಿನ ಬದಲಾವಣೆಗಳೊಡನೆ, ತಿ.ತಿ.ದೇ.ಗಳ ಹಿಂದಿನ ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಶ್ರೀ ಆಕೆಪಾಟಿ ಚೆಂಗಲ್ ರೆಡ್ಡಿಯವರು ಸದಸ್ಯರೊಡನೆ ತಮ್ಮ ಪದವಿಗೆ ರಾಜೀನಾಮೆ ನೀಡಿದ ನಂತರ, ತಿ.ತಿ.ದೇ.ಗಳ ಆಡಳಿತವನ್ನು ನೋಡಿಕೊಳ್ಳಲು ಆಂಧ್ರಪ್ರದೇಶದ ಸರ್ಕಾರ ಒಂದು ವಿಶೇಷಾಡಳಿತ ಪ್ರಾಧಿಕಾರವನ್ನು ಏರ್ಪಡಿಸಿದೆ.

ಹೊಸದಾಗಿ ಧರ್ಮಕರ್ತರ ಮಂಡಳಿಯನ್ನು ಏರ್ಪಡಿಸುವ ತನಕ ತಿ.ತಿ.ದೇ. ಸಂವಿಧಾನದ ಪ್ರಕಾರ ಆಡಳಿತಾಧಿಕಾರವನ್ನು ಹೊಂದಿದ ಈ ವಿಶೇಷಾಡಳಿತ ಪ್ರಾಧಿಕಾರ (ಸ್ಪೆಸಿಫೈಡ್ ಅಥಾರಿಟಿ) ದಲ್ಲಿ ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ಮುಜರಾಯಿ ಇಲಾಖಾ ಕಮಿಷನರ್ ಶ್ರೀ ವೆಂಕಟಪತಿರಾಜು, ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರುಗಳು ಇರುವರು.

## ಭಕ್ತರಿಗೆ ಹೆಚ್ಚಿನ ಸೌಲಭ್ಯಗಳ ಏರ್ಪಾಡುಗಳು

ಬೇಸಿಗೆಯ ತಿಂಗಳು ಹತ್ತಿರ ಬರುತ್ತಿದ್ದಂತೆ ಹೆಚ್ಚಬಹುದಾದ ತಿರುಮಲೆಯ ಯಾತ್ರಿಕ ಭಕ್ತರಿಗೆ ಅವರ ಕನಿಷ್ಠ ಸೌಲಭ್ಯಗಳನ್ನು ಪೂರೈಸಿ, ಅವರ ತಿರುಮಲೆ ಯಾತ್ರೆ ಒಂದು ಆಧ್ಯಾತ್ಮಿಕ ಅನುಭವವಾಗಿ ನೆನಪಿನಲ್ಲಿ ಉಳಿಯುವಂತೆ ಮಾಡುವ ರೀತಿಯಲ್ಲಿ ಹಲವಾರು ಕ್ರಮಗಳನ್ನು ಕೈಗೆತ್ತಿಕೊಳ್ಳಲು ಯೋಚಿಸಲಾಗುತ್ತಿದೆ.

ಯಾತ್ರಿಕರು ತಿರುಮಲೆಯಲ್ಲಿ ಬಸ್ ಇಳಿದ ಕೂಡಲೇ ಅವರಿಗೆ ವಿವಿಧ ರೀತಿಯ ಮಾರ್ಗ ದರ್ಶನದ ಅಗತ್ಯವುಂಟಾಗುವುದಾಗಿ ಇಲ್ಲಿ ಹಲವು ಭಾಷೆಗಳನ್ನು ಬಲ್ಲ ವ್ಯಕ್ತಿಗಳನ್ನು ನಿಯಮಿಸುವುದು, ಕರಪತ್ರಗಳನ್ನು ಮುದ್ರಿಸಿ ಹಂಚುವುದು, ತೋಮಾಲೆ ಸೇವೆ ಅರ್ಚನೆಗಳಲ್ಲಿ ಪಾಲುಗೊಳ್ಳಲು ಅನುಕೂಲವಾಗುವಂತೆ ಅಲಿಪಿರಿಯಲ್ಲಿ ವಾಹನ ಸಂಚಾರಕ್ಕೆ ರಸ್ತೆಯನ್ನು ಇನ್ನೂ ಒಂದು ಗಂಟೆ ಮೊದಲು ಎಂದರೆ ರಾತ್ರಿ 2 ಗಂಟೆಗೇ ತೆರೆಯುವುದು, ನಿರ್ಮಾಣ ಪೂರ್ತಿಯಾಗಿರುವ ವರಾಹ ಸ್ವಾಮಿ ಅತಿಥಿ ಗೃಹದಲ್ಲಿ ಕೂಡಲೇ ಫರ್ನೀಚರ್ ವ್ಯವಸ್ಥೆ ಮಾಡಿ ಅವನ್ನು ವಸತಿಗೆ ನೀಡುವುದು, ತಿರುಮಲೆಯಲ್ಲಿ ಹೆಚ್ಚಿನ ಶುಭ್ರತೆಗಾಗಿ ಮತ್ತೂ ಎರಡು ಟ್ರಾಕ್ಟರ್‌ಗಳನ್ನು ಬಳಸುವುದು, ಮೊದಲಾದ ಎಲ್ಲ ವ್ಯವಸ್ಥೆಯೂ ಏಪ್ರಿಲ್ ಮೊದಲವಾರದಲ್ಲಿ ಸೂತ್ರಬದ್ಧವಾಗದೇಕೆಂದೂ ತೀರ್ಮಾನಿಸಲಾಗಿದೆ.

ಕೇಂದ್ರ, ಪ್ರಾಂತೀಯ ಸರ್ಕಾರಗಳ ಸಮನ್ವಯದಿಂದ ಒಂದು ದೀರ್ಘಕಾಲಿಕ ಯಾತ್ರಿಕೋಪಯೋಗಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುವುದೆಂದು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ತಿಳಿಸಿದ್ದಾರೆ. ರೈಲ್ವೆ, ಟೆಲಿಕಾಂ, ಆರ್.ಟಿ.ಸಿ. ತಿ.ತಿ.ದೇ. ಸಮನ್ವಯದಿಂದ ಸಂಯುಕ್ತ ಸೇವೆಯನ್ನು ಭಕ್ತರಿಗೆ ಸಲ್ಲಿಸುವ ಆದರ್ಶವನ್ನು ಅವರು ವಿವರಿಸಿದರು. ಇದಕ್ಕಾಗಿ ತಿರುಪತಿ ಪಟ್ಟಣದ ನಾಗರಿಕರು ಪಾಲುದಾರರಾಗಬೇಕಿದೆ ಎಂದರು. ತಿರುಮಲೆಯಲ್ಲಿ ನೀರಿನ ಸೌಕರ್ಯವನ್ನು ಹೆಚ್ಚಿಸುವುದು, ನೀರಿನ ಸೂಕ್ತ ಬಳಕೆಯ ಬಗ್ಗೆ ಅವಗಾಹನೆಯನ್ನು ಹೆಚ್ಚಿಸುವುದು, ಭೂಗರ್ಭ ಜಲದ ಅನ್ವೇಷಣೆಗೆ ಸರ್ಕಾರವನ್ನು ಕೇಳುವಿಕೆ, ಭೂಗರ್ಭ ಡ್ರೈನೇಜ್ ವ್ಯವಸ್ಥೆ ಪೂರ್ತಿಯಾದ ಮೇಲೆ ಜಲಶುದ್ಧೀಕರಣ ವಿಧಾನದಲ್ಲಿ ಉದ್ಯಾನವನಗಳಿಗೆ ನೀರು ಪೂರೈಕೆ, ಮೊದಲಾದವು ಈ ಯೋಜನೆಯ ಹಲವು ಅಂಶಗಳಾಗಿವೆ.

ದೇವಾಲಯದಲ್ಲಿ ಸರ್ವದರ್ಶನವಕ್ಕೆಂದು ಯಾತ್ರಿಕರು ಕ್ಯೂ ಕಾಂಪ್ಲೆಕ್ಸ್‌ನಲ್ಲಿ ಕಾಯುವ ಕಾಲವನ್ನು ಕಡಮೆ ಮಾಡಿ ಹೆಚ್ಚು ಹೆಚ್ಚು ಮಂದಿಗೆ ದರ್ಶನಾವಕಾಶ ಉಂಟಾಗುವಂತೆ ವ್ಯವಸ್ಥೆಯನ್ನು ನೇರ್ಪುಗೊಳಿಸಲಾಗುತ್ತಿದೆ. ವಸತಿ ನೀಡಿಕೆ, ಆರ್ಜಿತ ಸೇವೆಯ ಟಿಕೆಟ್ ವಿತರಣೆಗಳಲ್ಲಿ ಕಂಪ್ಯೂಟರ್ ಬಳಕೆ ಹಾಗೂ ಲಾಡು ವಿತರಣೆಗೆ ಟೋಕನ್ ಬಳಕೆ ಮಾಡುವುದರಿಂದ ಅವುಗಳನ್ನು ಹೆಚ್ಚು ಕ್ರಮಬದ್ಧವೂ ಕಲುಷರಹಿತವೂ ಆಗಿರುವಂತೆ ಮಾಡುವುದಾಗುತ್ತಿದೆ. ದಿನವೊಂದಕ್ಕೆ 60 ರಿಂದ 75 ಸಾವಿರ ಲಾಡು ತಯಾರಾಗುತ್ತಿರುವ ಇಂದಿನ ಪರಿಸ್ಥಿತಿಯನ್ನು ಸುಧಾರಿಸಿ ದೇಸಿಗೆಯ ದಿನಗಳಲ್ಲಿ ಉತ್ಪಾದನಾ ಪ್ರಮಾಣಗಳನ್ನು ಹೆಚ್ಚಿಸಲು ಸೂಕ್ತಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಈಗ ಹದಿನೈದು ಸಾವಿರ ಮಂದಿಗೆ ದಿನವೂ ಉಚಿತ ಭೋಜನ ನೀಡುತ್ತಿದ್ದು ಇದನ್ನು ದ್ವಿಗುಣಗೊಳಿಸಲೂ, ಅದಕ್ಕಾಗಿ ಹೆಚ್ಚಿನ ವಂತಿಗೆಗಳನ್ನು ಸ್ವೀಕರಿಸಲೂ ಕ್ರಮಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. ಮಾನವ ಸೇವಾ ವಿಭಾಗದಲ್ಲಿನ ಸ್ವಿಮ್ಸ್ (ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ) ಬರ್ಡ್ (ವಿಕಲಾಂಗ ಆಸ್ಪತ್ರೆ) ಗಳನ್ನು ತಕ್ಕ ರೀತಿಯಲ್ಲಿ ಅಭಿವೃದ್ಧಿಗೊಳಿಸಲಾಗುವುದು.

## ಸ್ವಾಮಿಗೆ ಹೊಸ ಭುಜಕೀರ್ತಿ

ಹೈದರಾಬಾದಿನ ಕೈಗಾರಿಕೋದ್ಯಮಿ ಶ್ರೀ ಎಂ. ಜನಾರ್ದನರಾವು ಅವರು ತಿರುಮಲೆಯ ಸ್ವಾಮಿಯ ಅಲಂಕಾರಕ್ಕೆಂದು ಹೊಸ ಭುಜಕೀರ್ತಿಗಳನ್ನು ವಜ್ರಗಳಿಂದ ತಯಾರಿಸಿ ನೀಡಲು ಮುಂದೆ ಬಂದಿದ್ದಾರೆ. ಬೊಂಬಾಯಿಗೆ ಸೇರಿದ ಶ್ರೀ ತ್ರಿಭುವನ ಪ್ರಸಾದ ಭೀಮಜಿ ಝೂವೇರಿಯವರು ಸ್ವಾಮಿಗೆ ಭುಜಕೀರ್ತಿ ಮಾಡುವ ಕಾರ್ಯಕ್ರಮವನ್ನು ಆರಂಭಿಸಿದೆ. ಈ ತಯಾರಿಕೆ ಐದು ಅಥವಾ ಆರು ತಿಂಗಳಕಾಲ ಹಿಡಿಯುವುದೆಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ತಿಳಿಸಿದ್ದಾರೆ. ಭುಜಕೀರ್ತಿಗಳ ಸ್ವರೂಪ ಚಿತ್ರವನ್ನು ಅಂಗೀಕರಿಸಲಾಗಿದೆ.



## ವೈಭವದ ರಥಸಪ್ತಮಿ

ತಿರುಮಲೆಯಲ್ಲಿ ದಿನಾಂಕ 6-2-95 ರಂದು ರಥಸಪ್ತಮಿ ಉತ್ಸವ ವೈಭವದಿಂದ ಸಂಪನ್ನವಾಯಿತು. ಬೆಳಗ್ಗೆ 5-30 ರಿಂದ ರಾತ್ರಿ 9 ಗಂಟೆಯವರೆಗೆ ಸ್ವಾಮಿಯನ್ನು ವಿವಿಧ ವಾಹನಗಳಲ್ಲಿ ಊರ ಮೆರವಣಿಗೆಯಲ್ಲಿ ಕರೆತರಲಾಯಿತು. ಮೊತ್ತಮೊದಲು ಸೂರ್ಯಪ್ರಭವಾಹನದಲ್ಲಿ ಹೊರಬಂದ ಸ್ವಾಮಿಯನ್ನು ಭಕ್ತರು ಗೋವಿಂದ ನಾಮ ಘೋಷದ ನಡುವೆ ಬರಮಾಡಿಕೊಂಡರು ನಂತರ ಚಿಕ್ಕಶೇಷವಾಹನ, ಗರುಡವಾಹನ, ಹನುಮಂತ ವಾಹನ ಮೊದಲಾಗಿ ಒಂದರ ನಂತರ ಒಂದು ವಾಹನ ಸ್ವಾಮಿಯನ್ನು ರಥಬೀದಿಯಲ್ಲಿ ಕರೆತರುತ್ತಿರಲು ರಥಬೀದಿಯ ಇಕ್ಕೆಲದಲ್ಲಿ ಭಕ್ತರು ಸಾಲುಗಟ್ಟಿ, ಗುಂಪುಗಟ್ಟಿ, ದೇವರನ್ನು ಸ್ವಾಗತಿಸಿದರು. ಕಡೆಯದಾಗಿ ಚಂದ್ರಪ್ರಭವಾಹನ ವಾಗುವವರೆಗೂ ಭಕ್ತರೆಲ್ಲ ಎಲ್ಲಿದ್ದವರಲ್ಲಿಯೇ ನಿಂತು, ಕುಳಿತು ಇದ್ದರೆಂಬುದು ಒಂದು ಅಪರೂಪದ ಸಂಗತಿಯಾಗಿದ್ದಿತು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಜೆ.ಇ.ಓ. ಬಾಲಸುಬ್ರಹ್ಮಣ್ಯಂ, ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಮೊದಲಾದವರ ಜೊತೆಗೆ ಮಾಜಿ ಇ.ಓ. ಶ್ರೀ ಚಂದ್ರಮೌಳಿ ರೆಡ್ಡಿ, ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಮೊದಲಾದವರು ಭಾಗವಹಿಸಿದ್ದರು.

## ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ --- ಏಪ್ರಿಲ್ 1995

**ವಸಂತ ಪಂಚಮಿ**

--ಅ. ಚಿ. ಜ್ಯೋತಿಷೀ.

**ಯುಗಾದಿ**

--ಸಾ. ದೊಡ್ಡಯ್ಯಶಾಸ್ತ್ರಿ.

**ಚರಮ ಶ್ಲೋಕತ್ರಯ**

--ಕೆ. ಕೇಶವನ್.

**ಸಂತರು -- ಸಂಗೀತ**

--ಸಿ. ಗೋವಿಂದಾಚಾರ್.

**ಯಾಮುನರ ಶ್ರೀರಾಮಭಕ್ತಿ**

--ರಘುಸುತ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**
**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. / ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ: ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

## ತಿಂಗಳಿನ ಮುಖ್ಯದಿನಗಳು

### ಏಪ್ರಿಲ್ --- 1995

| | | |
|---|---|---|
| 1--4--95 | ಶನಿವಾರ | ಚಾಂದ್ರ ಮಾನ ಯುಗಾದಿ. ಯುವನಾಮ ಸಂವತ್ಸರಾರಂಭ. |
| 2--4--95 | ಭಾನುವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಗರುಡೋತ್ಸವ. |
| 5--4--95 | ಬುಧವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ರಥೋತ್ಸವ. |
| 13--4--95 | ಗುರುವಾರ | ತಿರುಮಲೆಯಲ್ಲಿ ವಸಂತೋತ್ಸವಾರಂಭ. |
| 14--4--95 | ಶುಕ್ರವಾರ | ಸೌರಮಾನ ಯುಗಾದಿ. ತಿರುಮಲೆಯಲ್ಲಿ ರಜತರಥೋತ್ಸವ. |
| 15--4--95 | ಶನಿವಾರ | ತಿರುಮಲೆಯಲ್ಲಿ ವಸಂತೋತ್ಸವ ಸಮಾಪ್ತಿ. ಚಂದ್ರಗ್ರಹಣ. |
| 19--4--95 | ಬುಧವಾರ | ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ ಗರುಡೋತ್ಸವ. |
| 22--4--95 | ಶನಿವಾರ | ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ ರಥೋತ್ಸವ. |
| 26--4--95 | ಬುಧವಾರ | ಶ್ರೀ ಭಾಷ್ಯಕಾರ ಉತ್ಸವಾರಂಭ. |



### ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ
ಶ್ರೀ ಕಪಿಲೇಶ್ವರಸ್ವಾಮಿ
ದೇವಾಲಯದಲ್ಲಿ ಆಸ್ತಿಕ
ಭಕ್ತ ಪ್ರಯೋಜನಕ್ಕಾಗಿ--

**ನಿತ್ಯಾಭಿಷೇಕ ಸೇವೆ**

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

ತಿ. ತಿ. ದೇ.



Edited and published on behalf of T.T. Devasthanams by N. S. Rama Murthy, M.A., and Printed at T.T.D. Press by P. Mohan Rao, Manager, T.T.D. Press, Tirupati - 517 507.

